# ಕರ್ಣಾಟಕ ಕಾವ್ಯಮಂಜರಿ.

— ಕೃಷ್ಣಗೋಪೀವಿಲಾಸಂ —

[೧೦]



ಎಸ್. ಜಿ. ನರಸಿಂಹಾಚಾರ್,

ಮ. ಆ. ರಾಮಾನುಜೈಯಂಗಾರ್,

ಇವರಿಂದ ಪರಿಷ್ಕರಿಸಲ್ಪಟ್ಟು

ಕರ್ಣಾಟಕ ಕಾವ್ಯಮಂಜರಿ ಪ್ರೊಪ್ರೈಟರುಗಳಿಗಾಗಿ

ಮೈಸೂರು,

ಸದ್ವಿದ್ಯಾಮಂದಿರ ಮುದ್ರಾಶಾಲೆಯಲ್ಲಿ ಮುದ್ರಿಸಲ್ಪಟ್ಟಿತು.

೧೮೯೪.

[ ಕ್ರಯ ೮ ಆಣೆ.

ಕರ್ಣಾಟಕಕಾವ್ಯಮಂಜರಿ ಆಫೀಸ್ ಮ್ಯಾ. ಪ್ರೊಪ್ರೈಟರ್ ಮ. ಕುಮಾರಸ್ವಾಮಿ

ತಿರುಮಲಾಚಾರ್, ಆ. ಅನಂದಾಳ್ವಾರ್ ಇವರಲ್ಲಿ ದೊರೆಯುತ್ತದೆ

# ಕೃಷ್ಣಗೋಪೀವಿಲಾಸಂ.

(ಸಾಂಗತ್ಯಂ)

ಶ್ರೀಮನೋಹರ ದಿವ್ಯಮೂರ್ತಿ ಸಂತತಪುಣ್ಯ । ನಾಮ ಸದ್ಗುಣಗಣಕೀರ್ತಿ ॥
ರಾಮನೆನ್ನಯ ಹೃದಯದೊಳಿರ್ದು ಕೃತಿಯನು । ನೇಮಿಸಿದಂತೆ ಪೇಳುವೆನು ॥೧

ಅಜನ ಪಟ್ಟದ ರಾಣಿಯಖಿಳಗುಣಶ್ರೇಣಿ । ವಿಜಿತಾಬ್ಜಪಾಣಿ ಸುಶ್ರೋಣಿ ॥
ಗಜರಾಜಗಮನೆ ಪನ್ನಗವೇಣಿ ಕಲ್ಯಾಣಿ । ಭಜಿಪೆ ವರವನೀಯೆ ವಾಣಿ ॥೨

ಮನವೆಂಬ ಮಾನಿನಿಗಿನಿಯ ಚೇತನನು ತಾಂ । ತನುವೆಂಬ ರಾಜ್ಯವಾಳುತಲಿ ॥
ವನರುಹಾಂಬಕನ ಮಹಿಮೆಯ ಬೋಧಿಸಿದ ತ । ನ್ನಿನಿಯಳಿಗತಿವಿನಯದೊಳು ॥೩

ಶೇಷನೀಧರೆಯೊಳಗುದಿಸಿ ಮಾನುಷದಿವ್ಯ । ವೇಷದಿಂ ಯತಿರಾಜನೆನಿಸಿ ॥
ಪೋಷಿಸಿ ಜಗದ ಜನರನು ಪಾವನಗೈದ । ಭಾಷ್ಯಕಾರರಿಗೆ ವಂದಿಸುವೆ ॥೪

ಪಂಕೆಜಾಕ್ಷನ ಪಾದವನು ಕಾಣ್ಬ ಮಾರ್ಗವ । ಶಂಕೆಯಿಲ್ಲದೆ ಕೃಪೆಯಿಂದ ॥
ಬಿಂಕದಿಂದುಪದೇಶಗೆಯ್ದ ಶ್ರೀಮದ್ಗುರು । ವೆಂಕಟಾರ್ಯರಿಗೆ ವಂದಿಸುವೆ ॥೫

ಛಂದಸ್ಸುಲಕ್ಷಣಗಳ ನೋಡಬೇಕೆಂಬ । ಸಂದೇಹಗಳ ಪರಿಹರಿಸಿ ॥
ಇಂದಿರಾಪತಿ ನಾರಾಯಣನ ಶ್ರೀಪಾದಾರ । ವಿಂದಕೆ ನತಿಗೆಯ್ಯುತಿಹೆನು ॥೬

ಗಂಗೆಯು ಗಾಜ ಕುಪ್ಪಿಗೆಯೊಳು ತರಲು ತಾಂ । ಗಂಗೆಯಲ್ಲದೆ ಜಲವಹುದೆ ॥
ರಂಗನ ಕಥೆಯ ಭಾಷಾಂತರದೊಳು ಪೇಳೆ ತಾ । ಮಂಗಳಮಹಿಮೆ ತಪ್ಪುವುದೆ ॥೭

ಆವನ ಪಾದದೊಳುದಿಸಿದ ಗಂಗೆ ತಾಂ । ಪಾವನವಾದಳೀಧರೆಗೆ ॥
ಆವಾಸುದೇವನ ಕಥೆಯೊಳು ತಪ್ಪ ಮ । ತ್ತಾವ ಸುಕೃತಿಯೆಣಿಸುವನು ॥೮

ಹರಿಶರಣರ ಸಂಗ ದುರಿತವಾರಣಸಿಂಗ । ಹರಿಕಥೆಯಮೃತತರಂಗ ॥
ಹರಿಸ್ಮರಣೆಯೆ ಮಂತ್ರಜಪ ವೇದವೇದಾಂಗ । ಪರಿವೊಡಿದೀಗಂತರಂಗ ॥೯

ರಂಗನ ನಾಮವಿಲ್ಲದ ಕೃತಿಯೊಳಗೆ ಪ್ರ । ಸಂಗರಚನೆಯಿದ್ದರೇನು ॥
ಮಾಂಗಲ್ಯಸೂತ್ರವಿಲ್ಲದ ಯುವತಿಗೆ ಭೂಷ । ಣಂಗಳ ತೊಡಿಸಿದಂತಿಹುದು ॥೧೦

ನಿಚ್ಚಳವಾಗಿರ್ದೊಡೆಯು ಕೃತಿಯೊಳಗೆ ನ । ಮ್ಮಚ್ಯುತನಾಮವೊಂದಿರಲು ॥
ಬಿಚ್ಚೋಲೆ ಕರಿಯ ಮಣಿಯೆ ಸಾಕು ಪತಿಯುಳ್ಳ । ಸಚ್ಚರಿತೆಯೆ ಲಕ್ಷ್ಮಿ ಧರೆಗೆ ॥೧೧

ಅಂಬುಜವದನೆ ಕೇಳಾಪರಮಾತ್ಮನ । ನಂಬದೆ ಪಲವು ದೈವಗಳಾ ॥
ಪಂಬಲಿಸುವರು ಶಾಲ್ಯನ್ನವನೊಲ್ಲದೆ । ಯಂಬಲಿಯನು ಸೊರೆವಂತೆ ॥೧೨

ಆರ ನಾಭಿಯೊಳುದಿಸಿದನಬುಜಾಸನ । ನಾರಿಂದಲಾದ ಶಂಕರನು ॥
ಬೇರಿಗಿಂದೆಲೆ ಮೊದಲೆಂಬ ಮೂರ್ಖರ ಮಾತ । ನಾರಾವೊಡೆಯು ನಂಬ ಬಹುದೆ ॥

ಹರಿಯೆಂದುದಿಲ್ಲ ತಾ ಹರನೆನ್ನಲಿಲ್ಲ ಮೇ । ಣ್ಸರಸಿಜಾಸನನೆಂದುದಿಲ್ಲ ॥
ಪರವಸ್ತುವೆಂದು ಕರೆಯಲು ಕರಿಯ ಕಾಯ್ದ । ಗರುಡವಾಹನನೆರಗುವೆನು ॥೧೪

ಪ್ರಳಯದೊಳಂಡವೆಲ್ಲವು ಮುಳುಗಲು ವಟ । ದೆಲೆಯೊಳು ಶಿಶುವಿನಂದದಲಿ ॥
ಪಲವು ಚೇತನಗಳನುದರದೊಳಿಂಬಿಟ್ಟ । ಜಲಜಾಕ್ಷಗಾನೆರಗುವೆನು ॥೧೫

ಹತ್ತು ಸಾವಿರವೆಂಗಳೊಡಗೂಡಿ ಬ್ರಹ್ಮಚಾ । ರಿತ್ವದ ಮಹಿಮೆಯ ಮೆರೆದು ॥
ಇತ್ತನಸುವನುತ್ತರೆಯ ಕಂದಗೆಂಬುದು । ಮತ್ತಾವ ದೇವರಿಗುಂಟು ॥೧೬

ಆಳಿದೊಡೆಯನಾದನಖಿಳಜಗಂಗಳಿ । ಗಾಳಾದನಾಧನಂಜಯಗೆ ॥
ಮೂಲೋಕವನು ತನ್ನೊಳಗೆ ತೋರ್ಪ ಕೃಷ್ಣನ । ಲೀಲೆಗಿನ್ನೆಣೆಯಾವದುಂಟು ॥

ಶಿಶುವಿನಂದದ ನಂದಗೋಪಯಶೋದೆಗೆ । ಪಶುಗಾಯ್ವ ಮಕ್ಕಳಿಗೊಲಿದು ॥
ವಶನಾಗಿ ಕೆಳೆಯನೆಂದೆನಿಪ ಶ್ರೀಕೃಷ್ಣನಾ । ಅಸಮಲೀಲೆಗೆ ನಮೋ ಎಂದೆ ॥೧೮

ಸಲ್ಲಲಿತಾನಂದಸುಖವನು ತೋರಿದನು ತಾಂ । ಗೊಲ್ಲವೆಂಗಳನೊಡಗೂಡಿ ॥
ಬಲ್ಲಿದ ಗುರುಶಿಷ್ಯನೆನಿಸಿದನುದ್ಧವ । ನಲ್ಲ ಸಾಂದೀಪದೇವನೊಳು ॥೧೯

ಶ್ರೀವರನವತಾರದೊಳು ಕೃಷ್ಣ ದೇವನ । ಪಾವನಚರಿತೆಯೊಳೆನ್ನ ॥
ಭಾವ ಬೆಸುಗೆವಡೆದಿರೆ ತಾತಾಯೆಂದು ಮ । ತ್ತಾವಧು ನಮಿಸಿ ಬಿನ್ನವಿಸಿ ॥೨೦

ಇಂದೀವರಾಕ್ಷಿ ಕೇಳ್ಯದುಕುಲದರಸ ಗೋ । ವಿಂದ ಧರೆಯೊಳವತರಿಸಿ ॥
ನಂದಗೋಕುಲದೊಳಗಾಡಿದ ನಾಟಕ । ದಂದವೆಲ್ಲವ ವಿವರಿಸುವೆ ॥೨೧

ವಸುಧೆ ಭಾರವ ಪೊರಲಾರೆನೆನುತ ಬಂದು । ಬಿಸಜಸಂಭವಗೆ ಬಿನ್ನವಿಸೆ ॥
ಬೆಸಗೊಳುತಿಂಗಡಲಲ್ಲಿಗೈತಂದು ಪೊಂ । ಬಸಿರ ನುತಿಸಿದ ಶ್ರೀಹರಿಯು ॥೨೨

ನಗಧರ ನಗುತ ನಾಲ್ಮೊಗನ ಬಿನ್ನಹಕೇಳಿ । ಗಗನದೊಳ್ಗಂಭೀರರವದಿ ॥
ಮಗನೆ ಕೇಳವನಿಯೊಳವತರಿಸುವೆನೆಂದು । ಜಗದೀಶನೊಲಿದು ನೇಮಿಸಿದ ॥೨೩

ಇತ್ತಲಾಮಧುರೆಯೊಳ್ಕಂಸನೆಂಬನು ಖಳ । ನೃತ್ತಿಯಿಂದವನಿಪನೆನಿಸಿ ॥
ಕೃತ್ತಿವಾಸಾದಿಗಳನು ಗಣಿಸದೆ ಬಲು । ಮತ್ತನಾಗಿರ್ದನಾಪುರದೆ ॥೨೪

ಇರಲವನನುಜೆ ದೇವಕಿಗೆ ಶೂರಾಖ್ಯನ । ವರಸುತ ವಸುದೇವನೆಂದು ॥
ವರನಾದನಧಿಕಸಂಭ್ರಮದಿ ವೈವಾಹದೊಳ್ । ಮೆರೆವಣಿಗೆಯ ಮಾಡುತಿರಲು ॥೨೫

ನುಡಿದುದಭ್ರದೊಳಶರೀರವಾಣಿಯು ಖಳ । ನೊಡನೆ ಕೇಳೆಲೊ ಖೂಳ ನಿನ್ನಾ ॥
ಒಡಹುಟ್ಟಿದವಳೆಂಟನೆಯ ಗರ್ಭದೊಳು ಜಗ । ದೊಡೆಯನುದಿಸಿ ಕೊಲ್ವನೆನುತ ॥

ಕೇಳಿದಾಕ್ಷಣ ಖಳ ಕನಲಿ ಕರದಿ ಕರ । ವಾಳವ ಪಿಡಿದು ಭಾಮಿನಿಯಾ ॥
ಸೀಳುವೆನೆನೆ ಸತಿ ನಡುಗಲು ವಸುದೇವ । ಹೇಳಿದ ಕಂಸಗುತ್ತರವಾ ॥೨೬

ಖತಿಗೊಳಲೇತಕರಸ ನಿನ್ನ ಪಗೆ ಯಾರು । ಸತಿಯೊ ಮೇಣಿವಳ ಗರ್ಭದೊಳು ॥
ಸುತರಾದೊಡವರನೊಪ್ಪಿಸುವೆನೆಂದೆನುತ ದು । ರ್ಮತಿಯ ತಿಳುಹಿ ಬಿಡಿಸಿದನು ॥

ವಸುದೇವ ನುಡಿದ ವಾಕ್ಯವ ಕೇಳಿ ಕಂಸ ತ । ನ್ನಸುವ ರಕ್ಷಿಸಿ ಕೊಂಬೆನೆನುತ ॥

ಮಿಸುಕದಂತಿವರ ಕಾವಲನಿಟ್ಟು ದಾನವ । ನೆಸೆದನಚ್ಯುತನ ಭಯದೊಳು ॥ ೮

ಇತ್ತಲಾ ಕಾರಾಗಾರದೊಳು ದೇವಕಿದೇವಿ । ಪೆತ್ತಳು ಗಂಡುಶಿಶುವನು ॥
ಮೃತ್ಯು ರಕ್ಕಸ ಬಂದು ಪಸುಳೆಯ ಕಿತ್ತುಕೊಂ । ಡೆತ್ತಿ ಕಡಿದ ಶಿಲಾತಲದಿ ॥ ೩೦

ಇಂತಾರು ಮಕ್ಕಳ ಪಡೆದಳು ಕಾಂತೆ ಕೈ । ತಾಂತಗೊಪ್ಪಿಸಿ ಬಸವಳಿದು ॥
ಚಿಂತಿಸಿ ಮರುಗುತ್ತ ನಾಥ ನಾಥನೆ ಲಕ್ಷ್ಮೀ । ಕಾಂತ ರಕ್ಷಿಪುದೆಂದವಳಬಲೆ ॥ ೩೧

ಇರಲು ಕ್ಷೀರಾಬ್ಧಿಯೊಳರವಿಂದನೇತ್ರ ತಾ । ನೊರಗಿರ್ದ ಫಣಿರಾಜನೊಡನೆ ॥
ಪರಮಪವಿತ್ರ ದೇವಕಿಯ ಗರ್ಭದೊಳು ನೀ । ನಿರು ಕಾರ್ಯವುಂಟೆಂದು ನಗುತ ॥

ಎನಲು ಹಸಾದವೆನುತಲಹಿರಾಜ ತಾ ॥ ನನುಪಮೆಯುದರದೊಳಿರ್ದು ॥
ಅನಘನಾಕ್ಷಣ ರೋಹಿಣಿಯ ಪೊಡೆಯನು ಪೊಕ್ಕು । ಜನಿಸಿದ ನಂದಗೋಕುಲದಿ॥

ದೇವಕಿಯುದರದೊಳೊಡನೆ ದೇವೋತ್ತಮ । ನಾವಿರ್ಭವಿಸಲದ ಕಂಡು ॥
ದೇವಸಮೂಹವೆರಸಿ ಬಂದು ನಾಲ್ಮೊಗ । ನಾವಧೂಮಣಿಗೆ ವಂದಿಸಿ ॥ ೩೪

ತಾಯೆ ನಿನ್ನಯ ಗರ್ಭದೊಗಳಖಿಲಾಂಡಶ್ರೀ । ನಾಯಕನವತರಿಸುವನು ॥
ಆಯಾಸವೇತಕಿನ್ನಚ್ಯುತ ನಿನಗೆ ನಿ । ರಾಯಾಸದೊಳು ಸುತನಹನು ॥ ೩೫

ಇದುವೆ ವೈಕುಂಠ ಕ್ಷೀರಾಬ್ಧಿಯಾದುದು ನಿನ್ನಾ । ಉದರಮಧ್ಯವೆ ವಿಷ್ಣುಪದವು ॥
ಯದುಕುಲತಿಲಕನ ಮಾತೆ ದೇವಕಿ ನಿನ್ನ । ಪದಕಮಲಕೆ ವಂದಿಸುವೆನು ॥ ೩೬

ಇಂತು ಸನ್ನುತಿಗೆಯ್ದು ಕಮಲಜನನಿತರೊ । ಳಂತರ್ಧಾನವನು ಕೈಕೊಂಡ ॥
ಸಂತಸದಿಂ ವಸುದೇವನ ಕಾಂತೆ ನಿ । ತಾಂತಸುಖದೊಳಿರುತಿರಲು ॥ ೩೭

ಆ ವನಿತಾಮಣಿಗಾದುದು ನವಮಾಸ । ಶ್ರಾವಣಬಹುಳಾಷ್ಟಮಿಯೊಳು ॥
ಪಾವನರೋಹಿಣಿ ವೃಷಭಲಗ್ನದೊಳಾಗ । ಶ್ರೀವರನವತರಿಸಿದನು ॥ ೩೮

ತರುಣಾರ್ಕಸದೃಶಕಿರೀಟದ ಕಾಂತಿಯಿಂ । ದರಳಿದ ಸರಸಿಜಾನನದ ॥
ಕರುಣಾಕಟಾಕ್ಷಾಪಾಂಗದ ತೆರೆಯೊಳಗಾಳ್ವ । ಮರಕತಮಕರಕುಂಡಲದ ॥ ೩೯

ಬಿರಿದ ಸಂಪಗೆಯ ಜರಿವ ನಾಸಿಕದ ಮುದ್ದು । ಗರೆವ ವದನದಂತರುಚಿಯಾ ॥
ವರಕಂಬುಕಂಠದೊಳ್ ಚಂದ್ರಮನಂದದೆ । ಮೆರೆವ ವಜ್ರದ ಮಣಿಸಿರಿಯಾ ॥ ೪೦

ಕರಚತುಷ್ಟಯ ಶಂಖಚಕ್ರಗದಾಭಯ । ವರಹಸ್ತಾಂಗುಲಿಮುದ್ರಿಕೆಗಳ ॥
ಸರಸಿಜಾಸನನುದಿಸಿದ ನಿಮ್ನನಾಭಿಯ । ಕರಿಕರೋರುಗಳ ಸೌಂದರದ ॥೪೧
ಪರಮಪವಿತ್ರವೆನಿಪ ಚಾರುಜಂಘೆಯ । ಧರೆಯ ಪೊರೆವ ತಳಿರಡಿಯಾ ॥
ಸುರರಿಪುತಿಮಿರಮಾರ್ತಾಂಡನೆನಿಸಿ ಕೊಂಬ । ಸುರುಚಿರವಾದ ಪೆಂಡೆಯುದ ॥೪೨

ಚಾರುಪೀತಾಂಬರವೆಂಬ ಮಿಂಚಿನ ನೀಲ । ನೀರದದಂತೆ ರಾಜಿಸುವ ॥
ವಾರಿಜಾಕ್ಷನ ಮೂರ್ತಿಯ ಕಂಡು ವಸುದೇವ । ಧಾರಿಣಿಗೊಡಲ ಚಾಚಿದನು ॥೪೩
ಹರಿಯ ಶ್ರೀಪದವ ಶಿರದೊಳಾಂತು ಭಕ್ತಿಯಿಂ । ಪರಮಪುರುಷ ನಮೋ ಎನುತ ॥
ಕರಿರಾಜವರದ ಕಾಕುತ್ಸ್ಥ ಲಕ್ಷ್ಮೀಕಾಂತ । ನರಹರಿಯೇ ನಮೋ ಎಂದ ॥೪೪

ಸರಸಿಜಭವಭವೇಂದ್ರಾದಿಗಳ್ತವಿಸಾದ । ಸರಸಿಜಪದವನು ಕಾಣಲರಿದು ॥
ಮರುಕವೆಂತುಟೊ ಭಕ್ತರೊಳು ನಿನಗೆಲೊ ದೇವ । ಕರುಣಾರ್ಣವ ಶರಣೆಂದ ॥೪೫

ಎನಲು ಚತುರ್ಭುಜದಿಂ ಬಿಗಿಯಪ್ಪುತೆ । ಅನಘಾನಕದುಂದುಭಿಯನು ॥
ವಿನಯೋಕ್ತಿಯಿಂದ ಮನ್ನಿಸುತೆ ದಂಪತಿಗಳಿ । ಗನುಪಮನೆಂದನುತ್ತರವಾ ॥೪೬

ಅತುಲಿತತಪಗಳ ಸಲಿಸುತೆನ್ನಂದದ । ಸುತನ ಬಯಸಲು ನಾ ನಿಮಗೆ ॥
ಸುತನಾಗಿ ಧರೆಯ ಪೊರೆಯಲೋಸುಗಲೀ । ಕ್ಷಿತಿಯೊಳಗೊಲಿದುದಿಸಿದೆನು ॥೪೭

ಎನುತಲಾಕ್ಷಣ ದಿವ್ಯರೂಪಮಂ ಮರಸಿ ತಾ । ಮನುಜಶಿಶುವ ಲೀಲೆಯನು ॥
ಅನುಪಮನಂಗೀಕರಿಸಿದೊಡಾಗಳೆ । ದನುಜಭಯವ ಸ್ಮರಿಸಿದರು ॥೪೮

ಕಂಡರೆ ಗಂಡುಶಿಶುವ ಬಿಡಲರಿಯನು । ದ್ದಂಡಪಾತಕಿ ಕಂಸನೀಚ ॥

... ... ... ... ... ...

ತಂದ ನಂದನ ಪಸುಳೆಯ ವಸುದೇವನ । ಮಂದಿರದೊಳು ಬಿಡಲಾಗ ॥
ಕಣ್ದೆರೆದಳಲು ಕಾವಲ ದಾನವರು ಪರಿ । ತಂದೆಂದರಾ ಕಂಸನೊಡನೆ ॥೪೯

ಕೇಳಿದಾಕ್ಷಣ ಕಂಸ ಬಂದು ದೇವಕಿಯನು । ಕೇಳಿದನಾಪೆಣ್ಣಸಿಸುವಾ ॥
ಬಾಳಮರುಕಡೆ ಬಿಡದೆ ದೈನ್ಯಪಡುತಿರೆ । ಕೇಳಲುಜ್ಜುಗಿಸಿ ಬೊಬ್ಬಿರಿದ ॥೫೦

ನೆಡುಗುತ ಪಸುಳೆಯನಣ್ಣಗೊಪ್ಪಿಸಲು ಕಾ । ಲ್ವಿಡಿದು ರಕ್ಕಸ ನಭಕಿಡಲು ॥
ನುಡಿಯುದಾಗಸದೊಳಾದುರ್ಗೆ ದಾನವನೆದೆ । ಯೊಡಯೆ ಕಠೋರವಾಕ್ಯವನು ॥೩೧

ಎಲವೊ ದಾನವ ನಿನ್ನ ಕೊಲಲೋಸುಗಸುರಾರಿ । ಬಳೆಯುತ್ತೈದಾನೆ ಗೋಕುಲದಿ ॥
ಚಲವ ಮಾಣೆನ್ನೆನುತಲಿ ನಭಕೆಡರಿದ । ಳಲಘುವಿಕ್ರಮೆ ವೇಗದಿಂದ ॥೩೦

ಬಂದು ದಾನವ ತನ್ನ ಮಂದಿರವನು ಪುಗು । ತಿಂದಿರೇಶನ ಭಯದಿಂದ ॥
ಕಂದಿ ತನ್ನಯ ಖಳವೃಂದವ ಕರೆದಾಗ । ಲೆಂದ ಮುಂದಹ ಕಾರ್ಯಗಳನು ॥೩೩

ಪೆಕ್ಕಸವಾದ ವಾಕ್ಯಗಳೆಂಬ ಕುಂತವ । ನಿಕ್ಕಿತೆದೆಗೆ ವಿಷ್ಣುಶಕ್ತಿ ॥
ಮಕ್ಕಳಾಟಿಕೆಯೇತಕಿನ್ನು ಗೋಕುಲದೊಳು । ರಕ್ಕಸಧ್ವಂಸಿ ಬಳೆವನು ॥೩೪

ಆದೊಡೇನಿದಕೊಂದುಪಾಯವುಂ ಪೇಳ್ವೆ ನಾಂ । ಮೇದಿನಿಯೊಳು ಶಿಶುಗಳನು ॥
ಛೇದಿಸಿ ಕಂಡು ಕೊಲ್ಲುವೊಡೆ ಪೂತನಿಯೀಗ । ಲೈದಲಿ ಗೋಕುಲಕೆಂದ ॥೩೫

ಎನಲು ಹಸಾದವೆನುತಲಿ ಪೂತನಿ ತನ್ನ । ಸ್ತನದೊಳು ತುಂಬಿ ವಿಷವನು ॥
ಅನುಪಮಮನುಜವೇಷವನು ಧರಿಸಿ ಖಳ । ವನಿತೆ ಬಂದಳು ಗೊಲ್ಲಪುರಕೆ ॥೩೬

ಇತ್ತಲಾ ಗೋಕುಲದಲಿ ನಂದಗೋಪ ತಾ । ಪುತ್ರೋತ್ಸವಾನಂದದಿಂದ ॥
ಇತ್ತನನೇಕಧೇನುಗಳ ದಾನಾರ್ಥದಿಂ । ದುತ್ತಮವಿಪ್ರರಿಗೊಲಿದು ॥೩೭

ಮಂದಿರಗಳನಲಂಕರಿಸಿ ರತ್ನಸ್ತಂಭ । ದಿಂದ ನಿರ್ಮಿಸಿ ಮಂಟಪವನು ॥
ಕಂದನನೆತ್ತಿಕೊಂಡಾವಜ್ರಪೀಠದಿ । ನಂದಯಶೋದೆಯರಿರಲು ॥೩೮

ವ್ರಜವನಿತೆಯರು ಬಂದರು ನೋಡಲೋಸುಗ । ವಜನ ತಂದೆಯ ಮಹೋತ್ಸವವಾ ॥
ತ್ರಿಜಗದ್ವಿನುತನ ಮುದ್ದಿಸುತ ಪಾಡಿದರಾಗ । ಗಜಗಮನೆಯರು ಸಂಭ್ರಮದಿ ॥೩೯

ಗೊಲ್ಲಸತಿಯರೊಡನಲ್ಲಿಗೈದಿದಳು ತಾ । ನೆಲ್ಲರಂದದಿ ಖಳವನಿತೆ ॥
ಚಲ್ಲ ಸಿಸುವನು ಮುದ್ದಿಸಿ ಮಡಿಲಿನೊಳಿಟ್ಟು । ಮೆಲ್ಲನಿತ್ತಳು ಬಿಸಮೊಲೆಯಾ ॥೪೦

ಕಂಡನಾದಾನವಾಂತಕನು ಪೂತನಿ ಮಾಳ್ಪ । ಲಂಡಬುದ್ಧಿಯನು ಚಿತ್ತದಲಿ ॥
ಮುಂಡೆಗೆ ತಕ್ಕ ಬುದ್ಧಿಯು ಪೇಳ್ವೆನೆನುತಸು । ಗೊಂಡನಾಸ್ತನಮುಖದಿಂದ ॥೪೧

ಡೆಂಢಣಿಸಲು ತನು ಕೂಗಿದಳಾಗ ಭೂ । ಮಂಡಲವೊದರುವಂದದಲಿ ॥

ಬೆಂಡಾದುವಾಲಿಗಳೆಸುವಿಗುಬ್ಬಸವಾಗೆ | ದಿಂಡುಗೆಡದಳದ್ರಿಯಂತೆ ||೭೨
ಪೊರಳಲು ಮೊಲೆಯ ಬಿಡದೆ ಮುರಮರ್ದನ | ನಿರಲು ರಕ್ಕಸಿಯುರದೊಳಗೆ ||
ಪುರಜನವೆಲ್ಲ ನಡುಗುತ ಭಯದೊಳಿರೆ | ಮರುಗಿದಳೆಂದು ಯಶೋದೆ ||೭೩

ರಕ್ಕಸಿಯಸುವಳಿಯಲು ಶಿಶುವನು ತಂದು | ತಕ್ಕವಿಸಿದ ನಂದಗೋಪಾ ||
ಮಿಕ್ಕನೆ ಬಾಲಕಪುಣ್ಯವಕಟ ! ಎನು | ತಕ್ಕರಿಂದಲಿ ಮುದ್ದಿಸಿದನು ||೭೪

ಪೂತನಿಯಳಿದಳೆಂಬುದ ಕೇಳಿ ತನ್ನಯ | ದೂತ ಶಕಟನೆಂಬ ಖಳನಾ ||
ಪಾತಕಿ ಕಂಸನಟ್ಟಿದನಂದು ಬಾಲನ | ಘಾತಿಪುದೆನುತ ಗೋಕುಲಕೆ ||೭೫

ನಂದಭವನದಿ ಕುಂದಣದ ತೊಟ್ಟಿಲೊಳು ಗೋ | ವಿಂದನಾನಂದದಿಂದಿರಲು ||
ಬಂದು ರಕ್ಕಸ ಬಂಡಿಯಂದದಿಂ ಪಾದಾರ | ವಿಂದದ ಬಳಿಯ ಸೇರಿದನು ||೭೬

ಇದುವೆ ಸಮಯ ಕೊಲ್ವೊಡಿವನೆನುತ ಹರಿ | ಯೊದೆಯೆ ದಾನವದೇಹವದುರಿ ||
ಪದುಮಭವಾಂಡ ಬಿರಿಯಲು ಘೋಳಿಡುತ ಬೆ | ಚ್ಚಿದಿರೆ ಬಿದ್ದನು ಖಳ ಧರೆಗೆ||೭೭

ಪದುಮನಾಭನ ಲೀಲೆಯದುಬುತವನು ಕಂಡು | ಬೆದರಿತಲ್ಲಿಯ ಜನನಿವಹ ||
ಸದಮಳಾನಂದವಿಗ್ರಹನ ತಕ್ಕವಿಸುತ | ಮುದದಿ ಮುದ್ದಿಪರು ಗೋವಳರು ||೭೮

ಏಸು ಜನ್ಮದ ಸುಕೃತವೊ ಗೋಪಗೋಪಿಯ | ರೀಸದಾನಂದಮೂರ್ತಿಯನು ||
ಕೂಸಿನಂದದೊಳು ತಕ್ಕವಿಪರಿವರ ಪುಣ್ಯ | ರಾಶಿಯೆನ್ನೆಂತೊ ಕೇಳಬಲೆ ||೭೯

ಇಂತಿರೆ ಗಾರ್ಗ್ಯನೆನಿಪ ಮುನಿ ಬಂದ ಶ್ರೀ | ಕಾಂತನ ಪದದರುಶನಕೆ ||
ಸಂತಸದಿಂದಾಚಾರ್ಯನ ಕುರಿತೆಂದ | ನಂತರಂಗವ ನಂದಗೋಪಾ ||೮೦

ಇತ್ತನಾಕುವರಕೆಂಬೀರವರನು ಮುನಿ | ಹಸ್ತಕಾನಂದ ವಿನಯದಿ ||
ಪುತ್ರರಿರ್ವರಿಗೆ ನಾಮವ ಕೃಪೆಮಾಳ್ಪುದೆಂ | ದುತ್ತಮನಡಿಗೆರಗಿದನು ||೮೧

ಎನಲು ಕೃಷ್ಣನ ಪಾದವನರುಹವನು ತನ್ನ | ಪಣೆಗೊತ್ತಿ ಮುದ್ದಿಸಿ ಮುನಿಪ ||
ಅನುಪಮಪುಣ್ಯನಾಮನಿಗೆ ನಾಮವನಿಡ | ಲೆನಗೆ ಸಾಧ್ಯವೆಯೆಂದ ನಗುತ ||೮೨

ವಿಷ್ಣುವೀಧರೆಯೊಳಗವತಾರವನು ಮಾಡಿ | ಕೃಷ್ಣಮೂರ್ತಿಯ ವಹಿಸಿರಲು ||
ಕೃಷ್ಣನೆಂಬಭಿದಾನವೀತಗೊಪ್ಪುವುದೆಂದು | ವೈಷ್ಣವರರಸ ನೇಮಿಸಿದ ||೮೩

ಬಲದೊಳು ರಮಣೀಯವೇಷದೊಳೀತನೆ । ಬಲವಂತನಾದುದರಿಂದ ॥
ಬಲರಾಮನೆಂಬಭಿಧಾನನಾಪುಗಳಿವು । ಕಲಿಮಲಹರವಹುದೆಂದ ॥೮೪

ಎಂದು ಕೃಷ್ಣನ ಪದದ್ವಂದಳಿ ತಲೆವಾಗಿ । ನಂದನಿಂದಪ್ಪಣೆವಡೆದು ॥
ಬಂದನು ಗಾರ್ಗ್ಯ ತನ್ನಾಶ್ರಮಕಿಲ್ಲಿ ಗೋ । ವಿಂದನಿದ್ದನು ನಂದಗೃಹದಿ ॥೮೫

ಒಂದು ದಿವಸ ತಾ ನಂದನ ಕಾಂತೆ ಗೋ । ವಿಂದನನಾಡಿಸುತಿರಲು ॥
ಬಂದ ವಾತಾಸುರನೆಂಬ ಕಂಸನ ದೂತ । ನಿಂದು ನೋಡಿದ ವಿಯತ್ತಳದಿ ॥೮೬

ಅರಿದನಸುರನ ಕೃತ್ಯವನು ಮುರಾಂತಕ । ನಿರದೆ ಮಾತೆಯ ತೊಡೆಯಿಂದ ॥
ಸರಿದು ಮೆಲ್ಲನೆ ಸಾರಿ ಧರೆಯೊಳಗಾಗಳು । ಪರಿದಾಡುತಿರ್ದ ಲೀಲೆಯಲಿ ॥೮೭

ಇರಲು ಗೋಕುಲದೊಳು ಬಿರುಗಾಳಿ ಬೀಸಲು । ತುರುಗಾಹಿಗಳು ಬೆದರಿದರು ॥
ಪರಿದಾಡುತಿರ್ದ ಶಿಶುವನಪಹರಿಸಿ ಕೊಂ । ಡಿರದೆ ರಕ್ಕಸ ನಭಕಡರೆ ॥೮೮

ಅಂಬರಕಡರಿ ದಾನವ ಸುಳಿಸುಳಿದು ವಿ । ಶ್ವಂಭರನೊಡನಾಡುತಿರಲು ॥
ಪಂಬಲಿಸುತಲಿ ಮೇಲ್ನೋಡುತ ಗೋಪಕ । ದಂಬ ಚಿಂತಿಸುತಿರ್ದುದಾಗ ॥೮೯

ಆಸಮಯದೊಳಸುರಾಂತಕ ತನ್ನಯ । ದಾಸರಾರ್ತಿಯ ಕಂಡು ನಗುತ ॥
ಏಸು ಪೊತ್ತಿನೊಡನಾಟವೆನುತ ಕಂಠ । ದೇಶವ ಪಿಡಿದ ಹಸ್ತದೊಳು ॥೯೦

ಕೊರಳ ಪಿಡಿಯಲು ದಾನವನಸು ದೇಹದಿಂ । ತೆರಳಿತು ನಿಮಿಷಮಾತ್ರದಲಿ ॥
ಧರೆಗೆ ಬೀಳಲು ಗಿರಿಯಂತೆ ವಾತಾಸುರ । ನುರದೊಳಾಡಿದ ಮುರವೈರಿ ॥೯೧

ನೋಡಿದರಾಗ ಗೋವಳರು ಶ್ರೀಕೃಷ್ಣನ । ರೂಢಿಗಚ್ಚರಿಯ ಲೀಲೆಯನು ॥
ನಾಡಾಡಿ ದೈವವಲ್ಲಿವನ ಬಾಲಕನೆನು । ತಾಡಿಸಿದೆವು ಜಗತ್ಪತಿಯಾ ॥೯೨

ಇಂತು ಭ್ರಮಿಸುವ ನಂದಾದಿಗಳನು ಕಂಡ । ನಂತಮಹಿಮ ನಸುನಗುತ ॥
ಭ್ರಾಂತಿಯ ಬಿಡಿಸಿ ಮೋಹವ ತುಂಬಿದನು ತನ್ನೇ । ಕಾಂತಭಕ್ತರಿಗೆಂದಿನಂತೆ ॥೯೩

ನಂದಯಶೋದೆಯರಾಪರಮಾತ್ಮನ । ಕಂದ ಬಾಯೆನುತ ತಕ್ಕವಿಸಿ ॥
ಮುಂದಿರಕೈತಂದು ಮಗುಳೆ ಮಾಧವನನಾ । ನಂದದಿಂದಾಡಿಸುತ್ತಿಹರು ॥೯೪

ನಂದನ ಕಾಂತೆ ಮುಕುಂದನನೆತ್ತಿಕೊಂ । ಡಿಂದುವ ತೋರಿ ನಗಸುತ ।
ಚಂದಮಾಮನ ಕರೆ ಕಂದಯೆಂದೆನಲು ಗೋ । ವಿಂದ ಕರೆದನಂದು ಶಶಿಯಾ ॥ ೯೬
ಬರೆಯು ಕರೆದನೆಂದು ಪರಿತಂದನಿಂದು ಶ್ರೀ । ಹರಿಕರತಳದೊಳೊಪ್ಪಿರಲು ॥
ಸರಸಿಜನೇತ್ರೆ ಕಣ್ಮುಚ್ಚಿ ನಡುಗೆ ಸುಧಾ । ಕರನ ಬಿಟ್ಟನು ಕೃಷ್ಣ ನಗುತ ॥
ರೋಮರೋಮದೊಳಜಾಂಡಗಳ ಧರಿಸಿದನು । ತ್ರಾಮವಂದಿತನ ತೊಟ್ಟಿಲೊಳು ॥
ಪ್ರೇಮದಿಂ ಮಲಗಿಸಿ ತೂಗಿ ಪಾಡುವಳಾ । ಮ್ನಾಯದ ಮಸ್ತಕಮಣಿಯಾ ॥ ೯೭
ಕಾಲರೀತಿಯನು ತಿಳಿದು ನಡೆವನ ಸಿರಿ । ಕಾಲಕಾಲಕೆ ಬಳೆವಂತೆ ॥
ಕಾಲಕರ್ಮಾತೀತ ಬಳೆದ ಗೋಕುಲದೊಳು । ಬಾಲಕೇಳಿಯಲಿ ರಂಜಿಸುತ ॥ ೯೮
ಪದರಚನೆಗಳಿಂದ ಚದುರವಾಕ್ಯಗಳಿಂದ । ಮಧುವ ಸೂಸುವ ದನಿಯಿಂದ ॥
ಮೃದುನಯನವರಸಭಾವಗರ್ಭಿತವಾದ । ಸದಮಳಕವಿತೆಯಂತೆಸೆದ ॥ ೯೯
ಅಂಬೆಗಾಲಿಡುತ ರತ್ನಸ್ಥಳದೊಳ್ತನ್ನ । ಬಿಂಬವ ಕಂಡು ಕರೆಯಲು ॥
ಅಂಬುಜಾಂಬಕೆ ತನ್ನ ಕರೆದನೆನುತ ಬಂದು । ಕುಂಭಿನಿ ನಿಂದು ಕೈಮುಗಿಯೆ ॥ ೧೦೦
ರಂಗುಮಾಣಿಕದವನಿಯೊಳು ಸಂಕರ್ಷಣ । ರಂಗಸಹಿತವಾಡುತಿರಲು ॥
ಗಂಗೆ ಯಮುನೆ ಸರಸ್ವತಿಯು ಕೂಡಿದ ವೇಣೀ । ಸಂಗಮವಾದುದಂಗಳವು ॥ ೧೦೧
ರತ್ನಸ್ತಂಭದೊಳು ಬಿಂಬಿಸಿದ ಕೃಷ್ಣನ ಕಂಡು । ಸುತ್ತ ನೋಡುತ ಬಲರಾಮ ॥
ಮತ್ತೆ ಬಂದನೆ ಹಿರಣ್ಯಕನು ಕಂಬದೊಳಿಂದು । ಚಿತ್ತೈಸಲೇಕೆಂದ ನಗುತ ॥ ೧೦೨
ಚೇಳಮಾಲೆಯ ಧರಿಸಿದನು ಶ್ರೀಕೃಷ್ಣನೀ । ನೇಳವ್ವ ನೋಡು ಬಾಯೆನಲು ॥
ಲೋಲಲೋಚನೆ ರಾಮವಾಕ್ಯವ ಕೇಳಿ ಮೈ । ಹಾಳಿಯಿಂ ಬಂದು ನೋಡಿದಳು ॥
ಮಗನೆ ಚೇಳನು ಮುಟ್ಟಿದರೆ ಕಚ್ಚದಿಹುದೆಯಿಂ । ನಗುವೆ ನಾನೇಳ್ವೆನೆನುತ ॥
ಮೃಗನೇತ್ರೆ ಬಳಲಿ ಬಾಯಾರಿ ಕೃಷ್ಣನ ಮೈಯ । ದುಗುಲದಿಂದೊರಸಿದಳಾಗ ॥
ಮಧುರಿಪುವಿನ ಮೂರ್ತಿಯನು ಶೋಧಿಸುತ ಮತ್ತೆ । ವದನವ ತೆರೆ ಕೃಷ್ಣಯೆನಲು ॥
ವಿಧಿಯ ಪೆತ್ತೈಯ ಬಾಯ್ದೆರೆಯ ಕಂಡಳು ಗೋಪಿ । ಪದುಮಭವಾಂಡಕೋ
[ಟಿಗಳಾ ॥ ೧೦೩

ಮಗುವೆಂದೆ ಬಗೆದೆ ನಿನ್ನನು ಕೃಷ್ಣ ನಿನ್ನಯ | ಬಗೆಯನರಿಯದಾದೆನಕಟಾ ! ॥
ಖಗರಾಜನಳತೆಗೈದುವವೆ ಗುಬ್ಬಿಯ ಮರಿ | ನಗಧರ ರಕ್ಷಿಪುದೆನಲು ॥೧೦೬

ತಾಯ ಮಾತನು ಕೇಳುತಾ ಅಂಬುಜಾಂಬಕ | ಮಾಯದ ನಗೆಯ ತೋರಿಸಲು ॥
ಬಾಯೆನ್ನ ಕಂದಯೆನ್ನಯ್ಯಯೆನುತ ಗೋಪಿ | ಪ್ರಿಯದಿಂದೆ ಮಗನ ಮುದ್ದಿಪಳು ॥

ಶಶಿಮುಖಿ ಮೊಸರ ಕಡೆಯುತಿರೆ ಬಂದಲ್ಲಿ | ಮಿಸುನಿದುಗಲದ ನಿರಿಯನು ॥
ಕುಸುಮನಾಭನು ಪಿಡಿದೆಳೆಯುತ್ತಮ್ಮಯ್ಯ ನಾ | ಪಸಿದೆನಂಮೆಯ ನೀವುದೆನಲು॥

ಎಂದ ಮಾತನು ಕೇಳದಿರಲು ಕೋಪದಿ ಕೃಷ್ಣ |ಮುಂದಿಹ ಮೊಸರ ಚಟ್ಟಿಯನು॥
ಒಂದಿನಿಸುಳಿಯದಂತುರುಳಿಸಿ ಬಳಿಕ ತಾ | ಬಂದನಂಗಳಕೆ ಬೇಗದೊಳು ॥೧೦೯

ಪಿಂದಟ್ಟಿ ಬಂದಳಾನಂದನ ಕಾಂತೆ ಗೋ | ವಿಂದನ ಪಿಡಿವ ಭರದೊಳು ॥
ಮಂದಿರದೊಳಗೆಲ್ಲ ಬಳಸಿ ಬಳಲಿಸುತಾ | ನಂದವಾಡಿದನು ತಾಯೊಡನೆ ॥೧೧೦

ಮುಡಿಪೂಸರವಲುಗಲು ಕರ್ಣತಾಟಂಕ | ಜಡಿಯೆ ತಳುಕು ದುಮ್ಮಾಳಿಸಲು ॥
ಕಡಗಕಂಕಣಕಾಂಚೀಧಾಮನೂಪುರರವ | ವಡಿಗಡಿಗೆಡೆಬಿಡದುಲಿಯೆ ॥೧೧೧

ಕರಿಯ ಕುತ್ತನಿಯ ಕಂಚುಕದೊಟ್ಟ ತೋಳಿನಿಂ | ದರವಿಂದಾಕ್ಷನು ತುಡುಕುತಿರೆ ॥
ಕರಿಯುಮರಿಯನು ಮುದ್ದಿಪ ಕರೇಣವಿನಂತೆ | ಕರವ ನೀಡಿದಳು ಯಶೋದೆ ॥

ಮುಟ್ಟಲರಿಯವು ಯೋಗಿಗಳ ನಿರ್ಮಲಚಿತ್ತ | ತಟ್ಟದುವರಸಿ ವೇದಗಳು ॥
ನಿಟ್ಟಿಸಲಳವೆ ಬ್ರಹ್ಮಾದಿಗಳೀತನ | ನಟ್ಟಿ ಪಿಡಿದಳು ಯಶೋದೆ ॥೧೧೩

ಕಟ್ಟಲೋಸುಗ ಕಡೆನೇಣ್ಗಳ ತರಸಿದ | ಳಷ್ಟಭೂತಿಗಳೊಡೆಯನನು ॥
ಹೊಟ್ಟೆಗಳತೆಯ ನೋಡಲು ಸಾಲದಿರೆ ಮತ್ತೆ |ಕಟ್ಟದಳೊಂದು ದಾಮವನು॥೧೧೪

ಇಂತು ಸಾಸಿರ ರಜ್ಜುಗಳ ತಂದು ನೋಡಲು | ಸಂತವಹಿಮೆಗಳವಡವು ॥
ಎಂತಿದಕೆನುತ ನುಡಿದು ನಂದನ ಕಾಂತೆ | ಕಂತುಪಿತನ ನೋಡುತಿರಲು ॥೧೧೫

ಜನನಿಯ ಕಂಡು ನಗುತ ಕೃಷ್ಣ ತನ್ನಯ | ತನುವ ಸಂಕುಚಿಸೆ ಯಶೋದೆ ॥
ಕನಕದಾಮದೊಳು ಕಟ್ಟದಳೊರಳಿನೊಳಂದಾ | ಅನುಪಮಾನಂದಮೂರ್ತಿಯನು॥

ಸುಮ್ಮನಿಂತಿರದಂಮೆಯನು ಕೇಳಿ ಕಾಡಲು | ಗುಮ್ಮಗೊಪ್ಪಿಸುವೆನೆಂದೆನುತೆ ॥

ಗಪ್ಮನೆ ಮನವಾರ್ತೆಗಮ್ಮ ಸಾರಲು ಕೃಷ್ಣ । ಹಮ್ಮೆದ್ದು ಕಿತ್ತನೊರಳನು ॥
ಪರಿತಂದು ಕೃಷ್ಣ ಬಾಗಿಲೊಳಿರ್ಪ ತರುವಿನ । ಯಿರುಕೆವಲೆಡೆಗೆ ಸರಿಯಲು ॥
ಚರಣ ಸೋಂಕಲು ತರು ಮುರಿದು ಬಿದ್ದುದು ಗೊಲ್ಲ । ಪುರಬೆರಗಾಗೆ ಜಜ್ಝರಿಸಿ॥
ಭ್ರಮರಕುಂತಳೆ ಕೇಳು ಧನದನಂದನರಿರ್ವ । ರಮರಮುನಿಯ ಶಾಪದಿಂದ ॥
ಯ ಮಳಾರ್ಜುನಾಖ್ಯತರುಗಳಾಗಿ ಜನಿಸಿರ್ದು । ಕಮಲನಾಭನ ಕಂಡರಾಗ ॥೧೯
ಆಪದ್ಬಂಧು ನಿನ್ನಮಿತಪ್ರಭಾವದ । ಶ್ರೀಪಾದ ಸೋಂಕಲಿಂದೆಮಗೆ ॥
ಶಾಪವಿಮೋಚನವಾದುದೆಂದಡಿಗಳಿ । ಗಾಪುರುಷರು ವಂದಿಸಿದರು. ॥೨೦
ಕರುಣಾಳುಗಳ ದೇವನವರೊಡನೆಂದನು । ವರಮುನಿ ನಾರದ ನಿಮಗೆ ॥
ಪರಮಾನುಗ್ರಹವ ಮಾಡಿದ ಸುಖದೊಳು ನಿಮ್ಮ । ಪುರಕೆ ಸಾರುವದೆಂದ ನಗುತ॥

ಇಂತೀ ಶ್ರೀ ಬಾಲವಿಲಾಸಶತಕಂ ಸಂಪೂರ್ಣಂ.

## —ವೇಣುವಿಲಾಸ ಶತಕಂ—

———o———

ಬಂದನು ನಂದ ನಂದನನ ಕಂಡಳಲು | ತ್ರಿಂದುಮುಖಿಯು ಜರೆದೆಂದ ||
ಮಂದಮತಿಯೆ ಭವಬಂಧರಹಿತನ ನೀಂ | ಬಂಧಿಸಲೇತಕೆಂದೆನುತ ||೧

ತನಯುನನೆತ್ತಿ ತಕ್ಕವಿಸಿ ಮುಂಡ್ಡಾಡುತ | ಮಣಿಮಂಚದೊಳಗೆ ಮಂಡಿಸಿದ ||
ಅನುಪಮನೊಡನಾಡುತಿಹಪರಸುಖಗಳ | ಗಣಿಸದಿರ್ದನು ನಂದಗೋಪ ||೨

ಧಾರಿಣಿಯೊಳಗಡಿಯಿಡುತ ಕುಮಾರಕಂ | ಶೀರವರಾಗೊಲ್ಲಪುರದಿ ||
ಕೇರಿಕೇರಿಯೊಳು ಗೋವಳರ ಮನೆಯ ಪೊಕ್ಕು | ಸೂರೆಗೊಂಬರು ಕ್ಷೀರದಧಿಯಾ||

ಕರೆಯುದ ಮುನ್ನ ತುರುವಿಗೆ ಕರುವ ಬಿಟ್ಟು | ಮರೆಗೊಂಡು ನೋಡಿ ನಗುವರು ||
ಕರೆವ ಪೆಣ್ಣಳ ಜಡೆಗಳನು ವತ್ಸದ ಬಾಲ | ಕೆರಿಯುದಂದದಿ ಗಂಟಿಕ್ಕುವರು ||೪

ನೆಲವಿನೊಳಿಹ ಬೆಣ್ಣೆಯನು ತುಡುಕುತೆ ತಮ್ಮ | ಕೆಳೆಯುರಿಗಿತ್ತು ಮಿಕ್ಕುದನು ||
ಒಳಗಿಹ ಸೊಸೆಯ ಬಾಯೊಳು ಮೆತ್ತಿ ತುಡು ತಿಂದ| ವಳಿವಳೆನುತೆ ದೂರಿಕ್ಕುವರು||

ಬಾಳೆದಿಂಡಿನೊಳು ಬೇಳನು ತುಂಬಿ ಪೂವೆಂದು | ಬಾಲೆಯುರಿಗೆ ಕೊಡಲದನು ||
ಕೇಳೀವೇಳೆಯೊಳು ಮುಡಿವೆವೆಂದು ಮಂಚದ | ಮೇಲಿರಿಸುವರು ದಿಂಡುಗಳಾ ||೬

ದಂಪತಿಗಳು ಮಂಚದೊಳು ಪವಡಿಸುವಲ್ಲಿ | ಸಂಪಗೆಯಲರಿವೆಂದೆನುತ ||
ಸೊಂಪಿನಿಂ ದಿಂಡನಳಿಯುಲು ವೃಶ್ಚಿಕಗಳ | ಗುಂಪು ಮುತ್ತುವವಂಗಗಳನು ||೭

ತತ್ತರಗೊಳುತ ಚಿತ್ತಲೆಬಂದಂಗಳದೊಳು | ನ್ಮತ್ತರಂದದಿ ಕುಣಿಯುತಿರೆ ||
ಚಿತ್ತಜಪಿತ ನಗುತಿದಿರೆ ಕುಣಿಯೆ ತಲೆ | ಗುತ್ತಿ ನಾಚುವರಬಲೆಯುರು ||೮

ವಾರಿಜಾಕ್ಷನ ಲೂಟಿ ಮೀರಿತು ಗೊಲ್ಲರ | ಕೇರಿಗಳೊಳು ಮನೆಗಳಲಿ ||
ನಾರಿಯುರೆಲ್ಲವೊಂದಾಗಿ ಯಶೋದೆಗೆ | ದೂರಿದರಂದು ಶ್ರೀಹರಿಯಾ ||೯

ನಾರೀಮಣಿಯೆ ಕೇಳು ಗೋಕುಲದೊಳಗಿರ | ಲಾರೆವಚ್ಯುತನ ಲೂಟಿಯೊಳು ||
ಸೂರೆಗೊಂಬನು ದಧಿಕ್ಷೀರಗಳನು ಮತ್ತೆ | ಕೋರಿವೆಣ್ಗಳ ಕಾಡಿಸುವನು ||೧೦

ಎಂದೊಡೆಂದಳು ನಂದಕಾಂತೆ ಮಂದಿರದೊಳು । ಕಂದ್ಯೆದು ಮಲಗಿ ಪೋಗ ॥
ತಂದಿರಿ ದೂರ ಬರಿದೆ ನಮ್ಮ ಕೃಷ್ಣನ । ತಂದು ತೋರಿರು ನೀವಮ್ಮ ॥೧೧
ಎನಲೊಪ್ಪಿಕೊಂಡು ಬಂದರು ಕಾಂತೆಯರು ತಮ್ಮ । ಮನೆಗಳಿಗೆ ಕೃಷ್ಣನನು ॥
ವನಿತೆಯರೆತ್ತಿಕೊಂಡೈದೆ ಬೀದಿಯೊಳು ತಾ । ನನಿತು ಕೃಷ್ಣನ ಮಯವಾಯಿತು ॥
ಪುಂಡರೀಕಾಕ್ಷನನೆತ್ತಿಕೊಂಡೈತರ್ಪ । ಹಿಂಡುವೆಣ್ಗಳ ತಂಡಗಳನು ॥
ಕಂಡು ಯಶೋದೆ ತನ್ನಯ ಕರದೊಳಗಿಹ । ಲಂಡಕೃಷ್ಣನ ನೋಡಿ ನಗುತ ॥೧೩
ಇನಿತರೊಳಾವ ಕೃಷ್ಣನು ಊಟಿಸಿದ ನಿಮ್ಮ । ನೆನುತ ಕೇಳಿದಳು ಯಶೋದೆ ॥
ಅನುಪಮಪುಣ್ಯಸದನಗೆಂದರಾಗೋಪ । ವನಿತೆಯರೆಂದು ಕೈಮುಗಿದು ॥೧೪
ಅರಿಯಲಾಪೆವೆ ನಿನ್ನ ಕುವರನ ಮಹಿಮೆಯ । ನರನೆಂದೆ ಮರುಳಾದೆವಕಟ ! ॥
ಹರಿಮಯವಾಯ್ತು ಗೋಕುಲವೆಲ್ಲ ಕೃಷ್ಣನ । ಪರಿಯನಾರರಿವರೆಂದೆನುತ ॥೧೫
ಹರಿಯ ಮಂಗಳಮೂರ್ತಿಯನು ಬಿಡಲಾರದೆ । ಉರದೊಳಗಪ್ಪಿ ಮುದ್ದಿಸುತ ॥
ತೆರುಗಾತಿಯರು ಮನೆಗುಯ್ದರಿತ್ತಲು ಗೋಪಿ । ಮುರಹರನೊಡನಾಡುತಿರಲು ॥
ಒಂದು ದಿವಸ ನಂದನಲ್ಲಿಗೆ ಬಂದುಪ । ನಂದನೆಂಬವನಾಲೋಚಿಸಿದ ॥
ವೃಂದಾವನೋಪಕಂಠದಿ ಮಂದಿರವ ಮಾಳ್ಪ । ದೆಂದನಿಲ್ಲಿರಲಾಗದೆನುತ ॥೧೭
ಎನಲು ಲೇಸೆನುತ ಗೋವಳರು ಸರಕುಗಳ । ನನುಗೊಳಿಸಿದರು ಬಂಡಿಯೊಳು ॥
ವನರುಹಾಂಬಕನ ಪಾಡುತ ನಡೆದರು ಬೃಂದಾ । ವನದ ಠಾವಿನ ಗೋಕುಲಕೆ ॥
ಇಂತು ಗೋಕುಲದೊಳಗಿರಲು ಲಕ್ಷ್ಮೀಕಾಂತ । ಚಿಂತಿಸಿದನು ಚಿತ್ತದೊಳಗೆ ॥
ಕಾಂತಾರದೊಳಗಿಹ ಸಚರಾಚರಂಗಳ । ಸಂತಸಗೊಳಿಸಬೇಕೆನುತ ॥೧೯
ವತ್ಸಪಾಲಕವೇಷವನು ಧರಿಸಿದನು ಶ್ರೀ । ವತ್ಸಲಾಂಛನ ಮಕ್ಕಳೊಡನೆ ॥
ವತ್ಸಂಗಳ ಕಾವ ನೆವದಿ ಬೃಂದಾವನ । ಕುತ್ಸವವನು ಮಾಡುತಿರ್ದ ॥೨೦
ಸುಮನಸಾಂದೋಳಿಕಾರೋಹಣಗೈದನು । ಕಮನೀಯಮೂರ್ತಿ ನಲವಿಂ ॥
ಕ್ರಮದಿಂದಲೂಳಿಗಗಳನು ಕೈಕೊಂಡು ಸಂ । ಭ್ರಮದೊಳೈದಿತು ಗೋಪಾರ್ಭಕರು ॥
ಹಡಪ ಕಾಳಾಂಜಿ ಕುಂಚದ ಬೀಸಣಿಗೆಯು ವಂ । ಗಡ ವಿಧಾಳಿವ ಚಾಮರಗಳಾ ॥

ಒಡೆಯ ಪರಾಕು ಬಾಡಾವಧಾನಗಳೆಂದು । ನುಡಿವ ಕಟ್ಟಿಗೆಕಾರರಿಂದ ॥೨೨
ಬಿಡದೆ ಪೂತನಿಶಕಟಾದಿದಾನವರನು । ಮಡುಹಿದ ಬಿರುದಾಂಕನೆಂದು ॥
ಕಡುಸುಮ್ಮಾನದೊಳುಗ್ಗಡಿಪ ವಂದಿಮಾಗಧ । ಗಡಣವೈದಿತು ಹರಿಯೊಡನೆ ॥೨೩
ಕೊಂಬುಕೊಳಲುತಿತ್ತಿವಾದ್ಯರವಗಳಿಂದ । ಮುಂಬೀಣೆಯವರು ನಡೆಯಲು ॥
ಅಂಬುಜನಾಭನೆಯ್ತಂದ ಬೃಂದಾವನ । ವೆಂಬ ಕಾನನಕೊಲವಿನಲಿ ॥೨೪
ಆಮಹಾಮಹಿಮನಂದಳವನಿಳಿದನು ಶ್ರೀ । ಧಾಮನ ಹಸ್ತಲಾಗಿನಲಿ ॥
ಮಾಮರದಡಿಯಲರಿನಗದ್ದಿಗೆಯೊಳು ಸು । ತ್ರಾಮವಂದಿತ ಮಂಡಿಸಿದನು ॥೨೫
ಆಮಹಾಲಕ್ಷ್ಮಿಯೊತ್ತುವ ಪಾದಗಳನು ಶ್ರೀ । ಧಾಮನೆಂಬವನೊತ್ತುತಿರಲು ॥
ರಾಮನ ನೋಡಿ ನಗುತ ತೋರುತಿರ್ದನು । ರಾಮಣೀಯಕವನಸಿರಿಯಾ ॥೨೬
ಅಣ್ಣ ನೋಡೀ ತರುಗಳು ಸತ್ಪುರುಷರಿಗೆ । ಪಣ್ಣಲೆಗಳನುಣಬಡಿಸಿ ॥
ತಣ್ಣನೆ ನೆಳಲನಿತ್ತತಿಥಿಪೂಜೆಯ ಮಾಳ್ಪ । ಪುಣ್ಯಾತ್ಮರಂತೊಪ್ಪುತಿವೆಕೊ ॥೨೭
ಇದೆ ಯಮುನೆಯನು ನೋಡಣ್ಣ ಸಂಸಾರದ । ಕೆದಡನು ತಿಳಿದರಿವಾಂತ ॥
ಸದಮಳಪುರುಷರ ಹೃದಯದಂತಿವೆ ನದಿ । ಯುದಕನಿರ್ಮಲವನೇನೆಂಬೆ ॥೨೮
ಹಿಂದಣ ಸುಖದುಃಖಗಳನೆಣಿಸದೆಯರಿ । ವಿಂದ ಮುಂದಣ ಮಾರ್ಗಪಿಡಿದು ॥
ಬಂಧರಹಿತರಂತೆ ಹಿಂದು ನೋಡದೆ ನದಿ । ಮುಂದೆ ಪರಿವುದು ನೋಡೆಂದ ॥೨೯
ಇಂತು ಶ್ರೀಕೃಷ್ಣ ಕಾಂತಾರವೈಭವವನೇ । ಕಾಂತಭಕ್ತರಿಗೆ ತೋರಿಸುತ ॥
ಸಂತಸದಿಂದಾಡುತಿರಲು ಕಂಸನ ದೂತ । ನಂತರಿಕ್ಷದಿ ನೋಡುತಿರ್ದ ॥೩೦
ಇರಲು ವತ್ಸಾಸುರನೆಂಬ ದಾನವ ಬಂದು । ಕರುವಿಂಡಿನೊಳು ಬೆರೆದಿರಲು ॥
ಹರಿ ತಿಳಿದವನ ಕಾಲ್ವಿಡಿದಪ್ಪಳಿಸಲು ಪ । ಲ್ಗಿರಿದು ಬಿದ್ದನು ಖಳ ಧರೆಗೆ ॥೩೧
ಕಂಡರಾಗೋಪಕುಮಾರರು ಕೃಷ್ಣನು । ದ್ದಂಡವೇಗದ ಪರಾಕ್ರಮವಾ ॥
ಪುಂಡರೀಕಾಕ್ಷನ ಪೊಗಳುತ ತುರುಗಳ । ಹಿಂಡ ಹೊಡೆದರು ನೀರ್ಗುಡಿಸಿ ॥೩೨
ನೀರ ತಡಿಯ ವೃಕ್ಷಾಗ್ರದೊಳು ಬೆಳ್ಳಕ್ಕಿಯಾ । ಕಾರದಸುರ ನೋಡುತಿರ್ದು ॥
ಘೋರೆಂದು ಮೊರೆಯಲರ್ಭಕರು ಕಂಡಂಜುತ । ವಾರಿಜಾಂಬಕ ನವೋಯೆನಲು ॥

ಶರಣಾಗತಜನಸುರಧೇನು ಬಂದಾಗ | ದುರುಳಬಕನ ನೋಡಿ ನಗುತ ||
ದುರುಳ ಮಕ್ಕಳನಂಜಿಸುವೆ ಯಾಕೆ ನಾನಿಹೆ | ನೊರಲು ನೋಡುವೆನೀಗಳೆಂದ||೩೪

ಎನಲು ಪಕ್ಷವೊಳಿರಗಿದ ಹರಿಯುರವನು | ದನುಜ ಕೋಪದೊಳೆ ಬೊಬ್ಬಿರಿದು ||
ವನಜಾಕ್ಷ ಲೀಲೆಯಿಂದವನ ವಕ್ಷವ ಸೀಳಿ | ಯುಣಬಡಿಸಿದ ಭೂತತತಿಗೆ ||೩೫

ಸುರರು ಪೂಮಳೆಗರೆದರು ಗೋಪಾರ್ಭಕರೆಲ್ಲಾ | ಹರಿಮೂರ್ತಿಸುಧೆಯ ಸೇವಿ [ಸುತ ||
ಕರುಣಾರ್ಣವನೆ ನೀನಿರಲು ಭಯವಾವುದೆಂ | ದೆರಗಿದರಚ್ಯುತನಡಿಗೆ ||೩೬

ಹರಿಯಿಂದಳಿದ ದಾನವರಿಗೆ ಮಾರ್ಗವ ಕೊಡು | ವುರುಬ ತಡೆಯಲಾರೆನೆನುತ ||
ತರಣಿಮಂಡಲ ಪಡುಗಡಲ ಸಾರಲು ಕೃಷ್ಣ | ತುರುಗಾಹಿಗಳ ಸನ್ನೆಗೆಯ್ದು ||೩೭

ಕೊಂಬುಕೊಳಲುರವದಿಂದ ವತ್ಸಂಗಳ | ನಂಬುದದನಿಯಿಂದ ಕರೆಯೆ ||
ಅಂಬುಜಾಂಬಕ ಬಂದನೆನುತಲೆ ಗೋಪನಿ | ತಂಬಿನಿಯರು ನೋಡುತಿರಲು ||೩೮

ಚೆಲುವರಾಯನು ಗೋಕುಲವ ಪೊಕ್ಕ ಭಕ್ತರ | ಹೃಜ್ಜಲಜವೊಳಗೆ ಪುಗುವಂತೆ ||
ನಿಳಯದಿಂದೋಡಿ ಬಂದಪ್ಪಿದಳಾನಂದ | ಲಲನೆಯು ವಿವಿನರಗಣಿಯಾ ||೩೯

ಆವಿವರಾಪರೂಪದೊಳುದಧಿಗಳಡಿ | ಗಾದವೀರೋಮಕೂಪದಲಿ ||
ಆವಯಾನಿಧಿಯ ತೊಳೆದಳು ಯಶೋದೆ ವಿ| ನೋದದಿಂ ಕರವಾತ್ರೋದಕದಿ||೪೦

ಅಂಬರವರೆಯುಡಿಗಳೆದ ಮಹಾತ್ಮನಿ | ಗಂಬರವನು ಪೊದಿಸುವಳು ||
ಪೊಂಬಟ್ಟಲೊಳು ಕ್ಷೀರವನು ಕುಡಿಸುವಳುಕ್ಷೀ| ರಾಂಬುರಾಶಿಯ ಶಯನನಿಗೆ ||೪೧

ಸೃಷ್ಟಿಗೊಡೆಯನ ಪುಟ್ಟಿಸಿದ ಮಗುವ ಮಣಿ | ದೊಟ್ಟಿಲೊಳಿಟ್ಟು ತೂಗುವಳು||
ಮುಟ್ಟುಮೀರಿತು ದಯವೀಯಶೋದೆಯು ಲಿ ತಾ | ನೆಷ್ಟು ಸುಲಭನೊ ಭಕ್ತರಿಗೆ ||

ಹರಿ ನಿದ್ರೆ ದಿಳಿದು ಕಣ್ದೆರೆಯೆ ತಾವರೆಗಳಂ | ದರಳಿದವರಸಲಾರೊಡನೆ ||
ಹರಿಯಾನನದ ಕಾಂತಿಗರೆಯಾಗಿ ರವಿ ಪೂರ್ವ | ಗಿರಿಗುಪ್ಪರಿಸಿದ ಲಘುವಿನಿಂ ||೪೩

ಮಂಗಳಮಜ್ಜನಗೈದು ಪಣೆಯೊಳು ಬೆ | ಡಂಗಿನಿಂ ರಚಿಸಿ ಕಸ್ತುರಿಯಾ ||
ರಂಗನ ಶಿಖಿಗೆ ಸುತ್ತಿದ ಮುತ್ತುಮಲಕಿನ | ಸಿಂಗರಗಳನೇನನೆಂಬೆ ||೪೪

ಕದಲ ಕೆಂವರಿಯೆರೆಯನು ಕಿವಿಗಿಟ್ಟನು | ಜಿಡುಮುತ್ತಿನೊಂಟಿಬಾವುಲಿಯಾ ॥
ಕಡಗ ಕಂಕಣ ವುಲಿಯುಂಗುರು ಪೊನ್ನಂದಿಗೆ | ಯೊಡನುಡಿಗಂಟೆಗಳುಲಿಯೆ ॥೪೫॥
ಪೊಡೆಗೆ ಸುತ್ತಿದ ಪೀತಾಂಬರ ಕರತಳದಿ ತಾಂ | ಪಿಡಿದ ಕೊಳಲ ಸೊಬಗಿಂದ ॥
ಷಡುರಸಾನ್ನವನು ಭುಂಜಿಸಿ ಬಲಸಹ ಜಗ | ದೊಡೆಯ ನಡೆದ ವೃಂದಾವನಕೆ ॥
ಅಂಬುಜಾಂಬಕನಾಡುತಿರೆ ಬನದೊಳಗೆ ಪ್ರ | ಲಂಬನೆಂಬಸುರನೈತಂದು ॥
ಡೊಂಬಿಯೊಳರ್ಭಕನಂತೆ ರಾಮನ ಪಿಡಿ | ದಂಬರಕಡರಿದನಾಗ ॥೪೭
ನಿಟ್ಟಿಸಿ ದನುಜನಾಟವ ಕಂಡು ರಾಮ ತಾ | ನಟ್ಟಹಾಸದೊಳು ಗರ್ಜಿಸುತ ॥
ಮುಟ್ಟಿಯಿಂದೆರಗಲಾಕ್ಷಣದಿ ದಾನವಸಿರ | ವಟ್ಟಿಯೊಳಡಗಿತೇನೆಂಬೆ ॥೪೮
ಪೋಡದಿಂದೆಳೆವ ರವಿಯುವೊಲು ರಾಮ ಬಂ | ದಾಡುವೆಡೆಯೊಳು ನಿಂದಿರಲು ॥
ನೋಡಿ ನಗುತ ಕೃಷ್ಣನೆಂದ ದಾನವ ನಿಮ್ಮೊ | ಳಾಡಬಂದರೆ ಕೊಂದಿರೆನುತ ॥೪೯
ಸರಸವಾಡಲು ಬಾರದಹಿಯೊಡನೆಂಬುದ | ಸ್ಮರಿಸದೆ ಖಳ ನಿಮ್ಮೊಳಾಡಿ ॥
ವಿರಸವಡೆವನಕಟೆನಲು ನಗುತ ರಾಮ | ನಿರಿಸಲುಹುದು ನಿಮಗೆಂದ ॥೫೦
ಮೊಲೆಯುನಿತ್ತವಳ ಕೊಂದೆವೆ ಬಾಗಿಲೊಳು ತೆಂವು | ನೆಳಲಾದ ತರುವ ಮುರಿದೆವೆ ॥
ಚಲರ ಮನೆಯುಲಿ ಪಾಲ್ಬೆಣ್ಣೆಯ ಕಳೆವು | ಗಳವೆ ನಿಮ್ಮವೊಲೆಂದ ರಾಮ ॥೫೧
ರಾಮಕೃಷ್ಣರು ವಿನೋದದೊಳಾಡುತಿರಲು ಶ್ರೀ | ದಾಮನೆಂಬವ ಪರಿತಂದು ॥
ಈ ಮಹಾರಣ್ಯದೊಳಧಿಕತಾಳೀವನ | ರಾಮಣೀಯಕತರವೆಂದ ॥೫೨
ಎನಲು ಲೇಸೆನುತ ತಾಳೀವನಕೈದಿದ | ರನುಪಮರರ್ಭಕರೊಡನೆ ॥
ಬನಕೆ ಬಂದಂತೆ ಬನದೊಳು ಲೂಟಿಸುತಿರೆ | ದನುಜ ಧೇನುಕ ಕಂಡನಾಗ ॥೫೩
ಗಾರ್ದಭದಂತೆ ಬೊಬ್ಬಿಡುತ ದಾನವ ಬಂದು | ಸಾರ್ದನಚ್ಯುತನ ಸಮ್ಮುಖವಾ ॥
ಊರ್ಧ್ವಲೋಕಕೆ ಕಳುಹಿದನು ರಕ್ಕಸನ ಜ | ನಾರ್ದನ ನಿಮಿಷಮಾತ್ರದಲಿ ॥೫೪
ಕರುವಿಂಡುಗಳನು ಮೆಯಿಸುತ ಗೋಪಳರ ಕು | ವರರು ಕಂಡರು ಮಹಾದ್ಭುತವ ॥
ಉರಗನ ವದನವೆಂಬುದನರಿಯದೆ ಪೊಕ್ಕ | ರಿರದೆ ಗಿರಿಯ ಗುಹೆಯೆನುತ ॥೫೫
ಅಘನೆಂಬ ದಾನವನಹಿಯ ರೂಪದಿ ಬಂದು | ನುಂಗಿದನರ್ಭಕರನೆಂದೆನುತ ॥

ನಗಧರ ಬಂದು ದಾನವನ ಸಂಹರಿಸಿ ಪ । ನ್ನಗಗರ್ಭಗತರನೀಕ್ಷಿಸಿದ ॥೫೬
ಸಚ್ಚಿದಾನಂದವಿಗ್ರಹನೀಕ್ಷಿಸಲು ಮಕ್ಕ । ಳೆಚ್ಚತ್ತು ಕಂಡರಚ್ಯುತನಾ ॥
ಮುಚ್ಚುಮರೆಯು ನಿನ್ನ ಕರುಣದಳತೆಗಿದೇ । ನಚ್ಚರಿಯೆನುತೆರಗಿದರು ॥೫೭
ತಂದೆಗಳಿರ ನೀವು ನೊಂದಿರಿ ಖಳನಿಂದ । ಲೆಂದು ಗೋವಿಂದನಪ್ಪಿದನು ॥
ತಂದ ಬುತ್ತಿಯನುಣಲೆಂದು ಮುಕುಂದ ಕಾ । ಳಿಂದಿತಟಕೆ ಕರೆತಂದ ॥ ೫೮
ಭೋಜನಮಂಡಲದೊಳು ಮಂಡಿಸಿದರು ಸ । ರೋಜನೇತ್ರನ ಸುತ್ತುವರಿದು ॥
ರಾಜೀವದಳದ ಮಧ್ಯದ ಕುಸುಮದವೊಲು । ಮೂಜಗದೊಡೆಯ ರಂಜಿಸಿದ ॥೫೯
ಕಲಸನ್ನಗಳ ಕರತಳದ ಮಧ್ಯದೊಳಿಟ್ಟು । ಬಳಸಿ ಬೆರಳಿನೆಡೆಗಳಲಿ ॥
ಪಲವು ತೆರದ ವ್ಯಂಜನವನಳವಡಿಸಿ ತಾ । ಕೆಳೆಯರಿಗಿತ್ತು ತುತ್ತುಗಳಾ ॥೬೦
ಅವರ ಕೈತುತ್ತ ತಾ ತೆಗೆದು ಸವಿಯುತ ಮ । ತ್ತವರಿಗೀಯುತ ಪ್ರಸಾದವನು ॥
ವಿವರ ಮೀರಿತು ಸ್ವಾಮಿಭೃತ್ಯಭಾವಗಳಾಗ । ದಿವಿಜರುದಿತಗೀರನಿಂದೆ ॥೬೧
ಆ ಸಮಯದೊಳಾಗಸದಿ ಬ್ರಹ್ಮಾದಿಗಳಿಂದ । ರೀಸನಕಾದಿಭಕ್ತರೊಳು ॥
ಏನು ಧನ್ಯರೊ ಗೋಪಸುತರ ಸೌಭಾಗ್ಯವು । ಶೇಷಾದಿಗಳಿಗರಿದಕಟಾ ! ॥೬೨
ಎನುತಜ ತನ್ನ ಮಾಯವನು ತೋರಿಸಿದನಂ । ದನುಪಮಮಾಯಾಧೀಶನಲಿ ॥
ಬನದೊಳಗಿರ್ದ ವತ್ಸಗಳನಂತರ್ಧಾನ । ವನು ಮಾಡಿದನು ನಿಮಿಷದೊಳು ॥೬೩
ಹರಿಯ ಸನ್ನಿಧಿಯೊಳಿರ್ದರ್ಭಕರೆಲ್ಲರು । ಕರುವಿಂಡನರಸಬೇಕೆನುತ ॥
ಸರಿಯುತಿರಲು ನೀವಿಲ್ಲಿಹುದೆಂದು ನೇಮಿಸಿ । ಕರುಣಾಳು ಹೊರಟನಾಕ್ಷಣದಿ ॥೬೪
ಬಂದು ಕೈಯೊಳು ಕಲಸನ್ನದ ತೆರಳೆ ಮು । ತ್ತೊಂದು ಕೈಯುಲಿ ಕೊಳಲಾಂತು ॥
ಬೃಂದಾವನದೊಳರಸಿದನು ವತ್ಸಂಗಳ । ನ್ವಂದವ ಮನುಜಲೀಲೆಯುಲಿ ॥೬೫
ಅಂತರೊಳರ್ಭಕರನು ಕಾಣದಿರೆ ಕೃಷ್ಣ । ನಿರಿತು ಬೊಮ್ಮನ ಕಾರ್ಯವೆನುತ ॥
ಅನುಸಮನಂಗೀಕರಿಸಿದನಂದಗಣಿತ । ಘನಬೆಮ್ಮನಾನುವಾಕೃತಿಯಾ ॥೬೬
ಆವಾವ ಬಣ್ಣದ ಕರುಗಳಾವನು ತಾನೆ । ಕಾವ ಗೋಪರ ಸುತರಂತೆ ॥
ಶ್ರೀವರನರಿತು ತಾನೇಆದನಮ್ಮತ । ವೇವೆಳ್ವನಮುಮ ! ಲೀಲೆಗಳಾ ॥೬೭

ಎಂದಿನಂತರ್ಭಕರೊಡನೆ ವತ್ಸಂಗಳ । ಸಂದೋಹವೆರಸಿ ಗೋಕುಲಕೆ ॥
ಬಂದನಚ್ಯುತನಿಳೆಯುಕೆ ಗೋವಳರು ತಮ್ಮ । ಮಂದಿರಗಳನು ಸಾರಿದರು ॥೬೮

ಕರುವಿಂಡುಗಳೊಳು ಮಮತೆ ಘನ ತುರುಗಳ್ಗೆ । ಕರುಗಳಿಮ್ಮಡಿ ತುರುಗಳೊಳು॥
ಮರುಕ ಮೀರಿತು ಮಕ್ಕಳೊಳು ಗೋಪಿಯರಿಗಿಂತು । ವರುಷವೊಂದಾದುದ
[ಷ್ಟರೊಳು ॥೬೯

ಗಿರಿಗುಹೆಯೊಳು ಕರುವಿಂಡು ಮಕ್ಕಳು ಸಹಿ । ತಿರಿಸಿ ತನ್ನೊಳು ತಾನೆ ನಗುತ ॥
ಹರಿಯೇನು ಮಾಡಿಕೊಂಡಿಹನೊ ನೋಡುವೆನೆಂದು । ಪರಮೇಷ್ಠಿ ಕಂಡನ
[ಚ್ಯುತನಾ ॥೭೦

ಆಸಮಯದೊಳಸುರಾರಿ ತೋರಿದ ಪರ । ವಾಸುದೇವಸ್ವರೂಪವನು ॥
ಸಾಸಿರಕೋಟಿ ನೇಸರ ಧಿಕ್ಕರಿಪ ಮೂರ್ತಿ । ಸಾಸಿರಕೋಟಿ ರಂಜಿಸಿತು ॥೭೧

ಒಂದೊಂದು ಮೂರ್ತಿ ಸನ್ನಿಧಿಯೊಳಿಹದು ಕೋಟಿ। ಯಿಂದುಶೇಖರಬ್ರಹ್ಮಾದಿಗಳು॥
ಇಂದಿರೆಸಹಿತಲನಂತಪೀಠದೊಳರ । ವಿಂದಲೋಚನನೊಪ್ಪುತಿರಲು ॥೭೨

ಪರಮಪುರುಷನ ತೇಜೋಮಯಶರಧಿಯ । ತೆರೆಯ ಕಡೆಯ ತುಂತುರಿನೊಳು ॥
ಪರಮೇಷ್ಠಿಯಾಳಿ ಮುಳುಗುತ ಭಯದೊಳಾಗ। ಸರಸಿಜಾಕ್ಷನ ಸ್ತುತಿಗೈದ॥೭೩

ಕರುಣಿಸೆನ್ನನು ಕಮಲಾಕಾಂತ ಕಮನೀಯ । ಕರ ನೀಲಮೇಘನಿಭಾಂಗ ॥
ಶರಧಿಶಯನ ಶಕಟಾದಿದಾನವಹರ । ಸುರಮುನಿವಂದ್ಯ ನಮಸ್ತೇ ॥೭೪

ನಿನ್ನ ಮಾಯಾಮೋಹದಿಂದ ಭ್ರಮಿತನಾದೆ । ನೆನ್ನಪರಾಧಶತವನು ॥
ಮನ್ನಿಸಿ ಕೃಪೆಯ ಮಾಳ್ಪದು ದೇವದೇವ ಪ್ರ । ಸನ್ನನಾಗೆನುತೆರಗಿದನು ॥೭೫

ತನುವೆಂಬುದಿಂದ್ರಿಯಂಗಳ ನೆರವಿಯೆ ಮತ್ತಾ । ಮನವ ನೆಮ್ಮಿಹುವಿಂದ್ರಿಯಗಳು॥
ಮನಕೆ ಚೈತನ್ಯಚೇತನಸಾಕ್ಷಿ ನೀನಿರೆ । ತನುವಿಗಾವುದು ಸ್ವತಂತ್ರಗಳು ॥೭೬

ಆಡಿಸಿದಂತಾಡುವೆನ್ನನೀಪರಿಯೊಳು । ಕಾಡಿಸಲೇತಕಿಂತಕಟಾ ! ॥
ನೋಡಲೆನ್ನಳವೆ ನಿನ್ನಮಿತತೇಜವ ಕೃಪೆ । ಮಾಡು ಮುನ್ನಿನ ಗೋಪಾಕೃತಿಯಾ॥
ಎನಲು ನಗುತ ತನ್ನ ತನಯನಾರ್ತಿಯ ಕಂಡು । ಮನುಜಲೀಲೆಯನಂಗೀಕರಿಸಿ ॥

ವನರುಹಾಂಬಕನಲ್ಲಿ ಸೈತಂದು ಬಿನ್ನಹ | ವನು ಮಾಡಿದನಜ ಹರಿಗೆ ||೭೮
ಒಳ್ಳೆನೀಬಾರಮೋಷ್ಯವ ಗೋಪಸುತರೊಡ | ನಿಲ್ಲೆ ಸೇವೆಯ ಮಾಳ್ಪೆ ನಿಮಗೆ||
ಸೊಲ್ಲುಮಾತ್ರದ ನುಡಿಯುಲ್ಲ ನೀವರಿಯದು | ದಿಲ್ಲ ಕೃಪೆಯ ಮಾಳ್ಪುದೆಂದ ||೭೯
ಎಂದು ಮಾತನು ಕೇಳುತಿಂದಿರೆಯರಸನಾ | ನಂದದಿಂದಪ್ಪಿದನಜನಾ ||
ಕಂದ ನಿನ್ನನು ಮಮತೆಯುಲನುಗ್ರಹಿಸಿದೆ | ವೆಂದಿದಕಂಜದೇಡೆಂದ ||೮೦
ಎನುತ ಸಂತೈಸಿ ವಿಧಿಯನು ಕಳುಹಿ ಕೃಷ್ಣ | ಬನದೊಳಾಕೆರುನಿಂಡುಸಹಿತ ||
ವನಭೋಜನದ ಬಳಿಸೈತರಲರ್ಭಕ | ರನುಖಮನೊಡನೆಂದರಾಗ ||೮೧
ಕರದ ತುತ್ತನು ಸವಿವಿನಿತರೊಳೀಕ್ಷಣ | ಕೆರುವನರಸಿ ತಂದೆ ಕೃಷ್ಣ ||
ತೆರಳೆ ಕೈಯೊಳಗದೆ ಬಾಯೆಮ್ಮ ತಂದೆ ಕು | ಳ್ಳಿರು ಯೆಂದು ಕರೆದರಚ್ಯುತನಾ ||
ಎನುತಲೆಲ್ಲರು ಸಹ ಭೋಜನಂಗೈಯಲು | ಇನನಸ್ತಾಚಲವ ಸಾರಿದನು ||
ಬನದೊಳರ್ಭಕರೊಡನಾಡುತ ಮೆಲ್ಲನಂ | ದನುಪಮ ಬಂದ ಗೋಕುಲಕೆ ||೮೩
ಅಘನ ಸಂಹರಿಸಿದನಚ್ಯುತನೆಂದೆಂದಾ | ಬಗೆಯನರುಪಿದರರ್ಭಕರು ||
ಮಗುವೆ ವರುಷವಾದುದು ವಾರ್ತೆಯೆಂದಾಗ | ಮೃಗನಯನೆಯರು ಶಂಕಿಸಲು ||
ಹರೆದುದೀಯದ್ಭುತವಾರ್ತೆ ಗೋಕುಲದೊಳು | ಹರಿಯು ಕೇಳಿದ ಬಲರಾಮ ||
ಮರೆಮಾಜಲೇತಕೆನ್ನೊಡನರಿವುವವೆನ | ಲರವಿಂದನೇತ್ರನಿಂತೆಂದ ||೮೪
ತುರುಗಾಹಿಗಳು ತುರುಗಳುಸಹಿತೆನ್ನಂಗ | ಸ್ಪರುಶಸುಖವನಪೇಕ್ಷಿಸಲು ||
ಮರುಕದಿಂದೆಲ್ಲರಿಗರ್ಭಕನವೊಲೊಂದು | ವರುಷವಾಡಿದೆನೆಂದ ನಗುತ ||೮೬
ಬಿದಿಯ ಬೇಗೆಯನು ಕೇಳುತ ರಾಮ ತನ್ನಯ | ಹೃದಯದೊಳಚ್ಚರಿಗೊಳಲು ||
ಪದುಮನಾಭನ ಮೂರ್ತಿಸುಧೆಯ ಸೇವಿಸುತೆ ಸಂ | ಪದದೊಳಿರ್ದುದು ಗೋಪ
[ನಿವಹ ||೮೭
ಇರಲಿರಲಚ್ಯುತಾನನದ ಸೌಂದರ್ಯವ | ತುರುಗಾತಿಯರು ನಿರೀಕ್ಷಿಸುತ ||
ಸ್ಮರಪರವಶೆಯರಾಗುತ ತಮ್ಮ ಹೃದಯದೊ | ಳರವಿಂದಾಕ್ಷನವೊಪ್ಪುತಿಹರು ||
ಕರುಗಾಹಿತನವನುಳಿದು ಗೋಪರೊಡಗೂಡಿ | ತುರುವ ಕಾಯಲು ಕೃಷ್ಣನೈದೆ||

ತರಳಾಕ್ಷಿಯರ ಮನ ಹರಿಯೊಡನೈದಲು । ಬರಿಡಿಂಬಮಾತ್ರದೊಳಿಹರು ॥೭೯
ಕಾಂತಾರವೊಳು ಲಕ್ಷ್ಮೀಕಾಂತನಾಡುತ ತನ್ನೀ । ಕಾಂತಭಕ್ತರನೊಡಗೂಡಿ ॥
ಮಾಂತರುವಿನ ನೆಳಲೊಳು ಕೊಳಲೂದುತ । ತಾಂ ತುರುಗಳನು ಕರೆವನು ॥೯೦
ಗಂಗೆ ಬಾರವ್ವ ಗೋದಾವರಿ ಕಾವೇರಿ । ತುಂಗೆ ಯಮುನೆ ಬಾಯೆನಲು ॥
ರಂಗ ಕರೆದನೆಂದು ನದಿವನಿತೆಯರು ಬಂ । ದಂಘ್ರಿಯುಗಕೆ ನಮಿಸುವರು ॥೯೧
ಇರಲು ಗೋವಳರು ತುರುಗಳ ನೀರ್ಗುಡಿಸಲು । ತೆರುಬಿತು ಯಮುನೆಯು ತಡಿಗೆ ॥
ಉರಗಾಲಯದ ಮಡುವೆಂಬುದನರಿಯದೆ । ಸೊರಗಿದರನಿಬರಾಕ್ಷಣದಿ ॥೯೨
ಕರುಣಾಕಟಾಕ್ಷದಿಂದೀಕ್ಷಿಸಿ ಗೋಪರ । ತುರುವಿಂದುಸಹಿತೆಬ್ಬಿಸಿದನು ॥
ಇರಬಾರದುರಗ ನಿಲ್ಲೆನುತ ತೀರದೊಳಿರ್ದ । ತರುವನೇರಿದ ಹರಿ ಭರದಿ ॥೯೩
ಮುಂಗೈಯ ಕಂಕಣವನು ನೇವರಿಸುತ ದಿ । ಡಂಗನಿಂ ಬಿಗಿದುಟ್ಟಂಬರವ ॥
ರಂಗನಾಕ್ಷಣ ದುಮ್ಮಿಕ್ಕಿದನು ಮಡುವಿಗೆ ಕಾ । ಳಿಂಗ ಬೆದರಿ ಬೆರಗಾಗೆ ॥೯೪
ಆರು ತನ್ನಾಲಯಕಿಳಿದರೆನುತ ಫಣಿ । ಕಾರಿದ ವಿಷವ ಹೂಂಕರಿಸಿ ॥
ನೀರು ಕಾಹೇರಿ ಕುದಿಯೆ ವಿಷಜ್ವಾಲೆ ತಾ । ಸೇರಿತಭ್ರವನೇವನೆಂದೆ ॥೯೫
ದುರುಳಕಾಳಿಂಗ ಭೋರ್ಗರೆಯುತ ಬಂದಾಗ । ಹರಿಯು ಕಂಡನು ಕೋಪದಿಂದ ॥
ತರುಬತಲಿದ್ದನಚ್ಯುತನ ಮಡುವಿನೊಳು । ನರನೆಂದೆ ಭ್ರಮಿಸಿ ಗರ್ವದಲಿ ॥೯೬
ನರರು ವರ್ಣದೊಳು ಪಿರಿಯರಾಗಿ ನಿಗಮಾಂತ । ಪರಿಯಂತ ಕಲಿತು ವಿದ್ಯೆಗಳಾ ॥
ಹರಿಯ ನಿರಿಗೆಯನರಿಯದೆ ಬಳಲುವಲ್ಲಿ । ಗರಳಾತ್ಮನರಿವನೆಂತಕಟ! ॥೯೭
ಪರಿದು ಪಿಡಿವನೊಮ್ಮೆ ಹರಿ ಮಾಯವಾಗಲು । ಮರುಗುತೆಣ್ದೆಸೆಯನೀಕ್ಷಿಸನು ॥
ಅರಿವುದೋರದ ಬರಿಜಡಕರ್ಮರಂತಹಿ । ಯರಸುವನಂತರಾತ್ಮಕನಾ ॥೯೮
ಆವ ಪರಿಯೊಳಾದೊಡೆಯು ಚಳಿಯದೆ ಮತ್ತೆ । ಶ್ರೀವರನೊಳು ತೊಳಲಿದರೆ ॥
ದೇವದೇವನ ಕಾಣಲಹುದೆಂಬವೊಲು ಫಣಿ । ಪಾವನಮೂರ್ತಿಯ ಪಿಡಿದಾ ॥೯೯
ಸಿಕ್ಕಿದ ಬಳಿಕ ಬಿಡದೆ ಬಾಲಕರು ತಮ್ಮ । ಹೃತ್ಕಮಲದೊಳಿಡುವಂತೆ ॥
ರಕ್ಕಸಾಂತಕನ ಬಿಡದೆ ಬಂಧಿಸುತ ಫಣಿ । ತೆಕ್ಕೆ ಮಧ್ಯದೊಳಿಟ್ಟನಾಗ ॥೧೦೦

ಕಂಡರು ಗೋವಳರೀಫಣಿರಾಜನು । ದ್ದಂಡಕೃತ್ಯವ ಹರಿಯಿರವಾ ॥
ದಿಂಡುಗೆಡೆದು ಧರೆಯೊಳು ಶೋಕಿಸುತ ದೂರ । ಕೊಂಡುಯ್ದರಾನಂದನೆಡೆಗೆ ॥

ಕೇಳಿದಾಕ್ಷಣ ಗೋಕುಲದ ಜನರೆಲ್ಲ ವೈ । ಹಾಳಿಯಿಂ ಬಂದು ನೋಡಿದರು ॥
ಗೋಳಿಟ್ಟರಾಗ ಯಶೋದೆನಂದಾದಿಗ । ಳೀವೆಳ್ವೆನದ್ಭುತವಾಯ್ತು ॥೧೦೨

ತುರುವಿಂಡುಗಳು ಬಂದು ಹರಿಯ ಬಳಸಿ ನಿಂದು । ಕರೆದವಕ್ಷಿಯೊಳು ಕಂಬನಿಯಾ ॥
ತರಳಾಕ್ಷಿಯರು ಕೃಷ್ಣ ಹಾಯೆನುತವನಿಯೊ । ಳೊರಗಿದರಾಗ ಮೂರ್ಛೆಯುಲಿ ॥

ಕಂಡನು ದಾನವಾಂತಕ ತನ್ನ ಭಕ್ತರು । ದ್ದಂಡಶೋಕವ ನೋಡಿ ನಗುತ ॥
ಕುಂಡಲಿಯನು ತಡಿಗೆಳತಂದು ಫಣದೊಳು । ತಾಂಡವಗೈದನರ್ತಿಯುಲಿ ॥೧೦೪

ಅಂಡಕೋಟಿಗಳ ಧರಿಸಿದ ಕೃಷ್ಣನ ಪಾದ । ಪುಂಡರೀಕದ ಹತಿಗುರಗ ॥
ಬೆಂಡಾಗುತಸು ಕಂಠಗತವಾಗಲಾತ್ಮನ । ಕಂಡರಾನಾಗಾಂಗನೆಯರು ॥೧೦೫

ಕರ್ಣಪತ್ರಗಳ ತಟ್ಟೆಯೊಳಿಟ್ಟು ಕೃಷ್ಣನ । ಸನ್ನಿಧಿಗೈತಂದರಾಗ ॥
ಕನ್ನೆಯರಿಗೆ ಪತಿಭಿಕ್ಷನನೀವುದೆಂ । ದುನ್ನತನಡಿಗೆರಗಿದರು ॥೧೦೬

ಶ್ರುತಿತತಿಗಳು ಕಾಣಲರಿದು ಬ್ರಹ್ಮಾದಿಗಳ್ । ಯತಿನಗೈಯಲು ಲಭ್ಯವಹುದೆ ॥
ಅತುಲಿತಪದವ ಶಿರದೊಳಾಂತು ನಿಂದೆವ್ಮ । ಪತಿಯ ಭಾಗ್ಯಕೆ ಸರಿಯುಂಟೆ ॥೧೦೭

ನಾಗಾಂಗನೆಯರ ಭಕ್ತಿಗೆ ಮೆಚ್ಚಿ ಮಾಧವ । ನಾಗಾಧಿಪನ ಬಿಟ್ಟನಾಗ ॥
ಬೇಗವೊಳೆದ್ದು ವಂದಿಸುತ ಕಾಳಿಂಗ ಮ । ತ್ತಾಗವಮೇದ್ಯಗಿಂತೆಂದ ॥೧೦೮

ಪರಮಾತ್ಮನೆಂಬುದನರಿಯದಜ್ಞಾತೆಯಿಂದ । ನರನೆಂದೆ ಮರುಳಾದೆನಕಟ ! ॥
ಮರೆವುದೆನ್ನಪರಾಧಶತವನೆನುತ ಮಗು । ಳೆರಗಿದನಚ್ಯುತಾಂಘ್ರಿಯೊಳು ॥೧೦೯

ಪದದೊಳೆರಗಿದ ಕಾಳಿಯನ ವ್ಯೆಯ್ದಡವುತ । ಯದುಕುಲದರಸನಿಂತೆಂದ ॥
ಇದು ವಶವಲ್ಲ ನಿನಗೆ ನಿನ್ನ ಪೂರ್ವದ । ಸದನಕೈದುವದು ನೀನೆಂದ ॥೧೧೦

ಎನಲು ಫಣೀಂದ್ರನಿಂತೆಂದ ತನಗೆ ಬಂದ । ವಿನತಾನಂದನನ ವೈರವನು ॥
ಅನುಪಮಾಂಘ್ರಿಗಳು ಶಿರದೊಳಿರೆ ಗರುಡ ನಿ । ನ್ನನು ಮುಟ್ಟನಂಜದಿರೆಂದ ॥೧೧೧

ಎನುತಲಹಿಯನು ಕಳುಹಿ ಕೃಷ್ಣಲೀಲೆಯ । ನನಿತನು ಕಂಡು ಗೋವಳರು ॥

ತನೆತನಗಾನಂದಾಬ್ಧಿಯೊಳೋಲಾಡುತ ಗೋಪ । ಜನವಾವರಿಸಿತು ಶ್ರೀಹರಿಯಾ ।
ನಂದ ಯಶೋದೆ ಗೋಪರ ವೃಂದ ಸಹಿತಲಾ । ನಂದಗೋಕುಲಕ್ಕೈದುತಿರಲು ॥
ಹಿಂದೆ ಮುಂದೆಲ್ಲಿಯು ಮಾರ್ಗಕಾಣದವೋಲು । ಬಂದು ಬಳಸಿತು ದಾವಾಗ್ನಿ ॥

ಅಂಜುತ ಗೋಪಗೋಪಿಯರೆಲ್ಲ ಹರಿಪಾದ । ಕಂಜವ ಮರೆವುಗಲಾಗ ॥
ಕುಂಜರವರದನವರಿಗಭಯವನಿತ್ತು । ಭಂಜಿಸಿದನು ದಾವಾನಳನ ॥೧೧೪

ಶ್ರೀವರನೊಲುಮೆಯುಳ್ಳರಿಗೆ ಜಗದಿ ಭಯ । ವಾವುದೆಂದಮರರಭ್ರದೊಳು ॥
ಪೂವಿನ ಮಳೆಗರೆಯಲು ಕೃಷ್ಣನೈತಂದ । ಗೋವಳರೊಡನೆ ಗೋಕುಲಕೆ ॥೧೧೫

ಅಂಗನಾಮಣಿಗಳನಂಗನಾಕಾರದ । ರಂಗನ ಮೂರ್ತಿಸುಧೆಯನು ॥
ಕಂಗಳಿಂ ಕುಡಿದು ದಣಿಯದೆ ಮನಂಗಳಿಂ । ಮಂಗಳಾಂಗನನಪ್ಪುತಿಹರು ॥೧೧೬

ಹರಿಭಕ್ತರಿಗೆ ಭಕ್ತಿಧುರವಿಜಯರರಕ್ತಿ । ವಿರಹಿಗಳಮೃತದ ಬುತ್ತಿ ॥
ದುರಿತಶರಧಿಯ ಹೀರುವ ಬಾಡಬಿಯು ನೆತ್ತಿ । ನೆರೆ ಕೋವಿದರು ಕೇಳ್ವುದರ್ತಿ ॥೧೧೭

ಇಂತೀ ವೇಣುಲೀಲಾಶತಕಂ ಸಂಪೂರ್ಣಂ.



## — ಶೃಂಗಾರ ಸಪ್ತತಿ —

ಚೆಲುವ ಚೆನ್ನಿಗನೊಲುಮೆಯನು ಬಯಸಿ ಗೋಪ | ಲಲನೆಯರೇಕಚಿತ್ತದೊಳು ||
ಜಲಜಮಿತ್ರನ ಕುವರಿಯ ಸನ್ನಿಧಿಯನ್ನೈದಿ | ಮಳಲಗೌರಿಯ ನೋಂತರಾಗ ||೧

ಎಲ್ಲಾದೇವರೊಳು ತಾನಿಲ್ಲದಿಲ್ಲೆಂಬುದ | ನೆಲ್ಲರಿಗರುಪುವಂದದಲಿ ||
ಫುಲ್ಲನೇತ್ರೆಯರು ಪಾರ್ವತಿಯ ಪೂಜಿಸೆ ಕೃಷ್ಣ | ಮೆಲ್ಲನಲ್ಲಿಗೆ ನಡೆತಂದ ||೨

ಆಸಮಯದೊಳು ಮತ್ತಾಶಶಿಮುಖಿಯರು | ನೇಸರಿನುಪಟಳದಿಂದ ||
ಆಸರಸಿಯೊಳಾಡುತುಡುವ ದುಗುಲಗಳ | ನಾಸ್ಯೆಕತದ ಮೇಲಿಟ್ಟಿರಲು ||೩

ಅಂಬರಮಧ್ಯೆಯರಂಬರಗಳನು ವಿ | ಶ್ವಂಭರನುಯ್ದು ತೀರದೊಳು ||
ಅಂಬರಡಂಬರವನು ಪಿಡಿಂಬಿಸ ಮರ | ಗೊಂಬನೇರಿದನಂಬುಜಾಕ್ಷ ||೪

ನಾಗಶಯನನಾಗಮವ ಕಂಡು ಕಾಂತೆಯು | ರಾಗನುರಾಗದಿಂದೈದಿ ||
ನಾಗವಾರಣಕರಿಣಿಗಳೆಂಬ ತೆರದಿ ಪು | ನ್ನಾಗತರುವ ಸೇರಿದರು ||೫

ಅಂಬರವ್ನತವೃಕ್ಷಮಧ್ಯದೊಳಗೆ ಮೇಘ | ಡಂಬರದಂತೆ ರಾಜಿಸುತ ||
ಜಂಭಾರಿಚಾಪವೆಂಬಂತೆ ಪುರ್ಬುಗಳು ಪೀ | ತಾಂಬರವೆಂಬ ಮಿಂಚೆಸೆಯೆ ||೬

ಅಂಬುಜಾನನಕಡರುವ ತುಂಬಿ ನಾಸಿಕ | ವೆಂಬ ಚಂಪಕವ ಕಂಡಂಜಿ ||
ಬಿಂಬಳವಿಡಿದು ಸುತ್ತುವವೊಲು ಕರುಳ್ಗಳಾ | ಡಂಬರವಿರ್ದುದಚ್ಯುತನ ||೭

ಕಾತುರದಿಂ ತರುಗಾತಿಯರ್ಮೇಲ್ನೋಡಿ | ಚಾತಕಿಯಂತೆ ಬಾಯ್ದೆರೆದು ||
ಪ್ರೀತಿಯಿಂ ಕಾರುಣ್ಯರಸವನೆರೆಯ ಜೀ | ಮೂತಾಂಗನೆಮಗೊಲಿದೆನುತ ||೮ .

ಅಂದು ಶ್ರೀಪಾದ ಸೋಂಕಲು ಕಲ್ಲು ಸತಿಯಾಗ | ಲಿಂದು ಕೃಷ್ಣಾಂಘ್ರಿಸ್ಪರ್ಶ
[ ದೊಳು ||
ಇಂದುವದನೆಯಾಗದಿರದು ಪಾದಪವೆಂದು | ಕುಂದಿದರಂದಬಲೆಯರು ||೯

ಮಾರನ ಶೌರತ್ವವನು ಮುದ್ರಿಸುವೆನೆಂದು | ಸಾರಿ ಬಂದುದು ಲಜ್ಜೆ ಭರದಿ ||
ನಾರಿಯರಂಗದೇಶವ ಕುಡಿಗಣ್ಣಿಗೆ | ತೋರದಂತಾವರಿಸಿದುದು ||೧೦

... ... ... ... ...

ಈತೆರನಾಗೆ ತನ್ನಯ ಶಕ್ತಿ ಲಜ್ಜೆಯಿಂ । ಬೀತುದೆಂಬುದ ಕಾಮನರಿದು ॥
ಚೇತನಾತ್ಮಕನೆ ರಕ್ಷಿಪುದೆನುತಲಿ ತಮ್ಮ । ತಾತನೊಡನೆ ಮೊರೆಯಿಡಲು ॥೧೦

ಮಗನ ವಾಕ್ಯವ ಕೇಳಿ ನಗಧರ ನಗುತಲಾ । ಮೃಗನಯನೆಯರನೀಕ್ಷಿಸುತ ॥
ಬಿಗುಮಾನವೇಕೆ ತೋಳ್ಗಳನೆತ್ತಿ ಕರಗಳ । ಮುಗಿವುದೆಂದೆನುತ ನೇಮಿಸಿದ ॥೧೩

ಮುರರಿಪುವೀಕ್ಷಿಸಲಾಕ್ಷಣ ಲಜ್ಜೆ ತಾ । ಸರಿದುದೆಂಬುದ ಕಾಮ ಕಂಡು ॥
ಹರಿನೇತ್ರವೆಂಬ ಶರಗಳಿಂದ ಕುಚಮಧ್ಯ । ದುರವ ಕೀಲಿಸುತ ಬೊಬ್ಬಿರಿದ ॥೧೪

ತೆರಹರಿಸಲು ತೆರಹರಿಯದೆ ಕಾಂತೆಯರ್ । ಮರೆವೊಗುತಚ್ಯುತಾಂಘ್ರಿಗಳಾ ॥
ಕರಗಳ ಮುಗಿದು ಕೃಪಾರ್ಣವ ರಕ್ಷಿಸೆಂ । ದೆರಗಿದರಾನಂದಸುತಗೆ ॥೧೫

ಸಚ್ಚರಿತೆಯರ ಭಕ್ತಿಯ ಕಂಡು ಮಾಧವ । ಮೆಚ್ಚಿದೆ ಕೇಳಿ ನೀವೆನಲು ॥
ಬಿಚ್ಚಿ ಬಿನ್ನವಿಸಲೀತಕೆ ಚಿತ್ತವರಿಯದೆ । ಪಚ್ಚಿಗಿಕ್ಕದಿರೆಂದರವರು ॥೧೬

ಅಂಗನೆಯರಿರ ನಿಮ್ಮಿಂಗಿತವನು ಬಲ್ಲೆ । ಹಂಗಗನಾದೆ ನಾ ನಿಮಗೆ ॥
ಸಂಗಸುಖವನೀವೆನಂಜದಿರೆಂದೆನುತ ನೀ । ಲಾಂಗ ಸಂತೈಸಿದನವರ ॥೧೭

ಎನಲು ಸಂತಸದೊಳು ವನಿತೆಯರು ತಂತಮ್ಮ । ಕನಕವಸನಗಳನುಟ್ಟು ॥
ಮನದಲ್ಲಿ ವನರುಹಾಂಬಕನ ಮೂರ್ತಿಯನಿಟ್ಟು । ಮನೆಗೆ ಬಂದರು ಮಾನಿನಿ
[ ಯರು ॥೧೮

ಒಂದು ದಿವಸ ನಂದಾದಿಗಳು ಗೋಕುಲದೊಳು । ಸಂದಣಿಗೊಳುತಿರೆ ಕಂಡು ॥
ಎಂದಿಗಿಂದಧಿಕಸಂಭ್ರಮವಿದೇನೆನುತ ಗೋ । ವಿಂದ ನಂದನ ಬೆಸಗೊಳಲು ॥೧೯

ಎಂದೊಡೆಂದನು ನಂದ ನಂದನನೊಡನೆ ಮು । ಕುಂದ ಕೇಳಿಂದು ಗೋಕುಲದಿ ॥
ಇಂದ್ರಯಾಗವನು ಮಾಡುವೆವೆನೆ ನಸುನಗು । ತೆಂದನಾನಂದಗುತ್ತರವಾ ॥೨೦

ಆವುದಿದಕೆ ವಿಧಿ ದೇವತೆ ಯಾರು ಮ । ತ್ತಾವುದು ಫಲವಿದರಿಂದ ॥
ಆವುದೀಕರ್ಮ ಲೌಕಿಕವೊ ವೈದಿಕವೊ ನೀ । ವೀವಗೆಯನು ಪೇಳ್ವುದೆನಲು ॥೨೧

ಎನಲೆಂದ ನಂದನೀಕರ್ಮಾಧಿದೇವತೆ । ಯ ನಿಮಿಷಾಧಿಪನಿದರಿಂದ ॥

ಘನವೃಷ್ಟಿಯಿಂ ತುರುಗಳು ತುರುಗಳು ಮೇಯ । ಲನುಪಮಫಲವಹುದೆಂದ ॥
ಶಕ್ರನಾರಿದಕೆ ಜಗವು ದೈವತಂತ್ರದಿಂ । ತತ್ಕಾಲಋತುಧರ್ಮದಿಂದ ॥
ಪಕ್ಷವರಿತು ವೃಷ್ಟಿಯಹವು ಬೆಳೆವುದು ತ್ರಿ । ವಿಕ್ರಮನಾಜ್ಞೆಯೊಳೆಂದ ॥೨೪
ಬರಿದೆ ಸಾಧನವನುರಿಯೊಳು ಸುರಿಯದೆ ಭೂ । ಸುರರುಂಡು ತೃಪ್ತಿವಡೆಯಲು ॥
ಹರಿ ತುಷ್ಟನಹನು ತುರುವಿಗೆ ನಿವಾಸಾದ್ರೀ । ಗಿರಿಯು ಪೂಜೆಯ ಮಾಳ್ಪುದೆಂದ ॥
ಜಲಜಾಕ್ಷ ನುಡಿದ ವಾಕ್ಯವ ಕೇಳಿ ಗೋಪರು । ಪಲವು ತೆರದ ಸಾಧನಗಳ ॥
ನಲವಿನಿಂದನುಗೊಳಿಸುತಲಿ ಗೋವರ್ಧನಾ । ಚಲದ ತಪ್ಪಲನು ಸಾರಿದರು ॥೨೫
ಪಾಕಶಾಲೆಗಳ ನಿರ್ಮಿಸಿ ವಿಪ್ರೋತ್ತಮರಿಗೆ । ಶಾಕಾದಿಸೂಪಸಾಧನವ ॥
ನೇಕೆಂಬುದಿತುವನುತ್ತವರ ಸತ್ಕರಿಸುತ । ನೇಕಹಿರಣ್ಯದಾನದೊಳು ॥೨೬
ಗಿರಿರಾಜನಿಗೆ ಪೂಜೆಗೈದು ಕ್ಷೀರಾನ್ನದ । ತೆರಳೆಯನಿರಿಸಿ ಕರದೊಳು ॥
ಇರಿಸಿ ಗೋವಳರು ಸಹಿತ ಕೃಷ್ಣನದ್ರಿಗಂ । ದೆರಗಿದ ನರರ್ೀಲೆಯಿಂದ ॥೨೭
ಅತ್ತಲಾಶೈಲಾಗ್ರದೊಳು ತುತ್ತುಗೊಳುತ ಮ । ತ್ತಿತ್ತ ಗೋಪರ ಸಮೂಹ
[ದೊಳು ॥
ಪ್ರಾರ್ಥಿಸುತದ್ರಿಶಿಖರದ ಮೂರ್ತಿಯ ನೋಡಿ । ಸ್ತೋತ್ರಗೈವನು ತನ್ನ ತಾನೆ ॥
ಕರ್ತೃಭೋಕ್ತೃತ್ವವೆರಡು ತಾನೆಯೆಂಬುದ । ಪ್ರತ್ಯಕ್ಷವಾಗ ತೋರಿಸುತ ॥
ಗೋತ್ರರಾಜನವ್ರೀಲವರೊಳು ಮಾತಾಡುವ । ತಾ ತುರುಗಾಹಿಗಳೊಡನೆ ॥೨೯
ಹರಿಗಪರಾಧಗೈವನ ಸೀಮೆಯೊಳಗೆ ತಾ । ನಿರಬಾರದೆನುತಿಂದ್ರದಿಶೆಯ ॥
ಪರಿಹರಿಸುತಲಿ ಮೆಲ್ಲನೆ ಬಂದು ಪಶ್ಚಿಮ । ಗಿರಿಯ ತಪ್ಪಲ ಸಾರ್ದ ದ್ಯುಮಣಿ ॥
ಹರಿಯಾಂಗುಧವ ಪೆಸರ್ವಕ್ಕಿಯುರದಿ ಸಂಧ್ಯಾ । ಕಿರಣ ವ್ಯಾಪಿಸೆ ಜೋಡನಗಲಿ ॥
ವಿರಹವೆಂಕಿಗೆ ವಕ್ಷ ಬಿರಿದರುಣಾಂಬುವು । ಸುರಿದುದೆಂಬಂತೆ ಸೂಚಿಸಿತು ॥೩೧
ಸರ್ವಲೋಕೇಶ್ವರನದ್ರಿರಾಜನಿಗಿಂದು । ಹಬ್ಬವ ಮಾಡಲಾಗಸದಿ ॥
ಉಬ್ಬುಚಪ್ಪರಕೆ ಕಟ್ಟಿದ ವಿತಾನಗಳಂತೆ । ಪರ್ಜತೆರುಣಮಯಕಿರಣ ॥೩೨
ವಿಮಲಾತ್ಮಕನು ಗೋಪರೊಳು ಬೆರೆದುದ ಕಂಡು । ಕಮಲಿ ಚೋಪಿಸಿ ಹರಿಯೊಡನೆ॥

ಕಮಲಾಲಯದ ಬಾಗಿಲನು ಮುದ್ರಿಸಿದವೋಲು | ಕಮಲದಳಗಳು ಮುದ್ರಿಸಿತು ॥
ಮಧುಲೋಭದಿಂದ ಭ್ರಮರಗಳು ಮೊರೆಯುತ | ಪದುಮವ ಬಳಸಿ ಕಾದಿರಲು ॥
ಪದುಮಾಲಯದ ಸುತ್ತುಗಾಹಿನ ಭಟರೆಚ್ಚ | ರದೊಳಿಹರಂತೆ ರಂಜಿಸಿತು ॥೩೪

ಹರಿಮೂರ್ತಿಯನು ಕಾಂಬ ವಿರಹದಿಂ ಪ್ರಾಚೀದಿ | ಕ್ತರುಣಿ ಬಿಳ್ಪಾದಳೆಂಬಂತೆ ॥
ಸುರಪನ ದೆಸೆ ಬಿಳಿಕಾದುದು ಕಾವಳಿ | ಪರಿದುದಿಂದುವಿನುದಯದೊಳು ॥೩೫

ಮಾರನಲಗ ಸಾಣೆವಿಡಿವ ಚಕ್ರವೊ ಪ್ರಾಚೀ | ನಾರಿಯ ಕರ್ಣಕುಂಡಲವೋ ॥
ಕ್ಷೀರಾಬ್ಧಿಕುವರಿಯಾಣ್ಮನ ಶ್ವೇತಚ್ಛತ್ರದಂ | ತೇರಿದ ಶಶಿ ಪೂರ್ವಗಿರಿಯಾ ॥೩೬

ಗೊಲ್ಲವೆಂಗಳ ವಿರಹಾನಲಜ್ವಾಲೆ ತಾ | ಬೆಳ್ಳಿತ್ತೆಣ್ದೆಸೆಗೆಂಬ ತೆರದಿ ॥
ಪಲ್ಲವಾಸ್ತ್ರನ ಕೀರ್ತಿಯವೊಲಿಂದುಕಿರಣ ತಾ | ನೆಲ್ಲಿಯುಂ ತುಂಬಿತಾಕ್ಷಣದಿ ॥
ಕುಮುದಾಸ್ತ್ರಗಳನು ಕೈಕೊಂಡು ಮದನ ಗೊಲ್ಲ | ಪ್ರಮದೆಯರನು ಕೈರಿತಿಡಲು ॥
ಕಮಲಾಕ್ಷಿಯರ ಮಾನಸಕೆ ಕುಮುದವಾಗೆ | ಕುಮುದವೆಂಬರು ನೈದಿಲೆಗಳ ॥೩೭

ಆಸಮಯದೊಳು ಕಾಂತೆಯರು ಕಾತರದಿಂದ | ವಾಸುದೇವನ ಮೂರ್ತಿಸುಧೆಯ ॥
ಆಸ್ವಾದಿಸುತ ಕಂಗಳೊಳು ಕಾಮನ್ನೈಸರ | ಬೇಸಗೆಯನು ನೀಗುತಿಹರು ॥೩೯

ಇಂತು ಶ್ರೀಕೃಷ್ಣ ಕಾಂತಾಪರಿವೃತನಾಗಿ | ಸಂತಸದಿಂದ ಗೋಕುಲಕೆ ॥
ಅಂತರಾತ್ಮಕೆ ಬಂದು ನಿಳೆಯಕ್ಕೈದಿದ ಭಕ್ತ | ರಂತರಂಗವ ಪುಗುವಂತೆ ॥೪೦

ಹರಿಮೂರ್ತಿಯನು ಬಿಟ್ಟು ಮರಳಲಾರದೆ ಗೋಪ | ತರುಣಿಯರಾಯಾಮಿನಿ
[ಯನು ॥
ಗರಳಾರ್ಣವವ ನೀಗುವಂತೆ ಕಳೆದರಾಗ | ತರಣಿ ಸುಳಿದ ಪೂರ್ವಗಿರಿಗೆ ॥೪೧

ಅನಿತರೊಳಾಪಾಕಶಾಸನ ಕೋಪದಿಂ | ದಿನಿತಾಯ್ತು ಗೋಪರಿಗೆನುತ ॥
ವನಿಧಿಯೊಳದ್ದುವೆನೀಗ ಗೋಕುಲವನೆಂ | ದೆನುತ ಗೋತ್ರಾರಿ ಗರ್ಜಿಸುತ ॥೪೨

ಕರೆಯೆ ಪುಷ್ಕಳಸಂವರ್ತನ ಕರೆ ನಿಗಳವ | ತರಿಯರಿ ಪ್ರಳಯಮೇಘಗಳ ॥
ಕರೆಯುಲಿ ಮಳೆಯ ಗೋಕುಲವ ನಿಮಿಷದೊಳು | ಕುಗುಹ ಮೊರಸಲೆಂದ ಸುರಪ ॥
ಇರಲು ಮೇಘಗಳಭ್ರವನು ಮುಸುಕಲು ಸಿಡಿ | ಲೆರಗುತಾರ್ಭಟಿಸಿ ಗೋಕುಲಕೆ ॥

ಕರಿಯು ಸುಂಡಲಿನ ಪ್ರಮಾಣ ವೃಷ್ಟಿಯು ಧಾರೆ । ಕರೆದುದದ್ಭುತವನೇನೆಂಬೆ ॥೪೪
ತುರುಗಳೆಲ್ಲವು ಸಿಡಿಗೊಂಡುವು ಗೋಪರ । ನೆರವಿ ಕಂಗೆಟ್ಟು ಮರುಗುತ ॥
ದುರುಳ ಕೃಷ್ಣನ ಮಾತ ಕೇಳಿ ದೇವೇಂದ್ರನ । ಜರೆಯಲಿಂತಾಯ್ತು ಕಟಕಟೆನುತ ॥೪೫
ಪರಮಪುರುಷನಲ್ಲಿಗೈತಂದರನಿಬರು । ತೆರನಾವುದಿನ್ನೆಮಗೆನಲು ॥
ಕರಕಮಲಗಳ ನೆಗಹಿ ಕೃಷ್ಣ ನೀಪಂಜ । ದಿರಿ ಗಿರಿಯಿದೆ ನಿಮಗೆಂದ ॥೪೬
ಹರಿ ನೆಗಹಿದನು ಗೋವರ್ಧನಾಚಲವನು । ತೆರುವ್ಯಾಗಸರಸಿಗಳೊಡನೆ ॥
ಕರದಿಂದ ಕಳಚಿ ಬೀಳುವು ಗಿರಿ ನಂಬಿ ಬಂ । ದಿರಿ ಭಯವೇಕೆಂದ ನಗುತ ॥೪೭
ಎನಲು ಕೃಷ್ಣನ ಮೂರ್ತಿಯನು ಕಂಡು ಗೋಪರಂ। ದಿನಪಾಧಿಪನನೀಡಿಸುತ ॥
ಅನುಪಮಾನಂದದಿಂ ಬಂದರೆಲ್ಲರು ತಮ್ಮ । ಮನೆಗಳಿಗೈದುನಂದದಲಿ ॥೪೮
ಚಿತ್ತಜಪಿತನನೀಕ್ಷಿಸುತಲಿಂದ್ರಿಯಗಳ । ವೃತ್ತಿಗಳನು ಮರೆದಾಗ ॥
ಪುತ್ಥಳಿಯವೊಲಿರವರು ದಿವಾರಾತ್ರಿಗ । ಳೆತ್ತಲೆಂಬುದನು ತಿಳಿಯದೆ ॥೪೯
ತುರುಗಳೆಲ್ಲವು ಹರಿಚರಣವ ನೋಡುತ । ಕರುಗಳ ಗಂಬಲ ಮರೆದು ॥
ಪರಮಪುರುಷನೊಳಡಗಿಪ ಚಿತ್ತವ ತಮ್ಮ । ಮರೆದುವು ಮೃಗಗಳಂದದಲಿ ॥೫೦
ಇಂತೇಳು ದಿವಸವಾದುದು ಕೃಷ್ಣನ ಲೀಲೆ । ಯಂತರೀಕ್ಷದಿ ಕಂಡು ಸುರಪ ॥
ಕಂತುಪಿತನ ನರನೆಂದೆಣಿಸಿ ಕಿನ್ನ । ಭ್ರಾಂತಿಗಿನ್ನೇಮೇಳ್ವೆನೆಂದ ॥೫೧
ತಿರುಗಿ ಮೇಘ ಸ್ವಾಮಿದ್ರೋಹಿಗೆಗೆ ನಾ । ಗುರುವಾದೆನಕಟಕಟೆನುತ ॥
ಪರಮೇಷ್ಠಿಯಲ್ಲಿಗೈದಿದನಿಂದ್ರನಿತ್ತಲು । ಹರಿಗಡಿದುದು ಮಳೆಯಾಗ ॥೫೨
ಸರ್ವಜನರನು ಕಳುಹಿ ಕೃಷ್ಣ ಸುರಪನ । ಗರ್ವವನಿಳುಹುವಂದದಲಿ ॥
ಪರ್ವತವನು ಧರೆಗಿಳುಹಿ ಗೋಕುಲದೊಳು । ಸರ್ವಲೋಕೇಶ್ವರನಿರಲು ॥೫೩
ಅತ್ತಲಿಂದ್ರನು ಬೊಮ್ಮಗೆರಗಿ ತಾ ನಡೆದ । ವೃತ್ತಾಂತವನು ವಿವರಿಸಲು ॥
ಸತ್ಯಲೋಕಾಧಿಪ ಮರುಗಿಯೆ ಜರೆಯುತ । ಸುತ್ರಾಮನ ಕುರಿತೆಂದ ॥೫೪
ಆರನಾವೆಂದು ಪ್ರಾರ್ಥಿಸಿದೆವು ಧರೆಗಾಗಿ । ಕ್ಷೀರಾರ್ಣವದ ತಡಿಗೈದಿ ॥
ಆರು ಬಂದವತರಿಸಿದರು ಮರ್ತ್ಯಗಲ । ದಾರು ಶ್ರೀಕೃಷ್ಣ ಹಾನವರಿ ॥೫೫

ದುರುಳತನವನು ಮಾಡಿದೆ ಶಕ್ರ ನಿನ್ನನು । ಜರೆವೊಡೆ ಸಮಯವಲ್ಲೀಗ ॥
ಸುರಧೇನುಸಹಿತಲೋಕರುಣಾಳುವೆಡೆಗೈದಿ । ಮರೆವುಗು ಮನ್ನಿಪನೆಂದ ॥೫೬ ...

ಭರದಿ ಬಂದನು ಸುರನಾಥ ಶ್ರೀಕೃಷ್ಣನ । ಚರಣದ ಮೇಲಡನೆಡೆದು ॥
ಕರುಣಾರ್ಣವನೆ ರಕ್ಷಿಸೆನ್ನಪರಾಧವ । ಮರೆವುದೆಂದೆಂದರುಹಿದನಾಗ ॥೫೭

ಅಂಗವಮರರು ನಿನಗೆಯಾಗ ನೀ ನಿನ್ನ । ಅಂಗವೆಸಗಿದ ತಪ್ಪುಗಳ ॥
ಕಂಗೊಳಿಸಿದರೆ ಕಾವವರದಾರಿನ್ನು ನೀ । ಲಾಂಗ ರಕ್ಷಿಪುದೆನ್ನನೆಂದ ॥೫೮

ಎನಲು ದೇವೇಂದ್ರನತ್ತಿ ತಕ್ಕೈಸಿ ತ । ದ್ವಿನಯೋಕ್ತಿಯಿಂದ ಮನ್ನಿಸುತ ॥
ಅನಘನು ಸುರಭಿಯು ಕರೆಯೆ ಬಿನ್ನೈಸಿದ । ಳನುಪಮನಡಿಗಭಿನಮಿಸಿ ॥೫೯

ಅಜ ಕಳುಹಿದ ದೇವರಭಿಷೇಕಕೋಸುಗ । ಭುಜಗಶಯನ ರಕ್ಷಿಸಲು ॥
ಗಜರಾಜವರದ ನಗುತ ತರಿಸಿದನು ಮೂ । ಜಗವಮಂಗಲತೀರ್ಥಗಳನು ॥೬೦

ಅಸುರಾರಿಯಭಿಷೇಕೋತ್ಸವವ ನೋಡಲು ಮಹಾ । ಋಷಿಗಳೆಲ್ಲರು ಬಂದರಾಗ ॥
ಕುಸುಮ ಚಂದನ ಕ್ಷೀರ ದಧಿ ಘೃತ ಮಧುಗಳಂ । ದೆಸೆಯೆ ಸುವರ್ಣಕುಂಭದೊಳು ॥
ಪುರುಷಸೂಕ್ತಾದಿಮಂತ್ರಗಳಿಂದ ಋಷಿಗಳಾ । ಪುರುಷೋತ್ತಮನ ಪೂಜೆಗೈಯ್ಯ ॥
ಸುರವನಿತೆಯರು ನರ್ತಿಸೆ ದೇವದುಂದುಭಿ । ಮೊರೆಯೆ ಕುಸುಮವೃಷ್ಟಿ ಕರೆಯೆ ॥

ಆದುದಚ್ಯುತಗಭಿಷೇಕಮಹೋತ್ಸವ । ವಾದುದೀಧರೆಗೆ ಮಂಗಳವು ॥
ಮಾಧವನಂಘ್ರಿಗೆ ನಮಿಸಿ ಸುರರು ಸಹಿ । ತೈದಿದನಮರೇಂದ್ರ ದಿವವ ॥೬೨

ಚೆಲ್ವರೆರೆಯನ ಮೂರ್ತಿಯ ಕಂಡಪ್ಸರೆಯರು । ತ್ಫಲ್ಲಶರನ ಬಾಣಹತಿಗೆ ॥
ತಲ್ಲಣಗೊಳುತಲೆಂದರು ಸರಿಯಾವುದೀ । ವಲ್ಲವಿಯರ ಭಾಗ್ಯಕೆನುತ ॥೬೩

ಇರಲು ವಸಂತಸಮಯ ಬಂದುದಾಗಲೀ । ವಿರಹಿಮೋಧಕ್ರತುವಿಂಗೆ ॥
ತರುಗಾತಿಯರ ಕಾಮಾಗ್ನಿಯನು ತಂದೆಲರಿಂದ । ಉರುಬಿದನಾಗ ವಸಂತ ॥೬೪

ಕಾಮನಾಚಾರ್ಯನಾದನು ವಸಂತನು ತಾನೆ । ನೇಮದಿಂ ದೀಕ್ಷಿತನಾದ ॥
ಸೋಮರಜತಪಾತ್ರೆಯೊಳು ಸುಧೆಯಾಜ್ಯವ । ಹೋಮಕಾಹುತಿಯ ಮಾಡಿ
[ದರು ॥೬೫

ಶುಕ ಮಂತ್ರಗಳನು ವಾಚಿಸೆ ಸಾಮಗಾನದಿಂ । ಪಿಕನಿಕರಗಳು ಘೋಷಿಸಲು ॥
ಸ್ರುಕು ಸ್ರುವ ಮಾಂದಳಿರಾಗೆ ಭ್ರಮರತತಿ । ಬಕುತಿಯಿಂ ಮೊಳ್ಪುದೊಳಿಗವ ॥
ಮಂದಮಾರುತನಗ್ನಿಯನು ಹುತಗೊಳಿಸೆ ತಾ । ನಿಂದು ಋತ್ವಿಜನಾದನಾಗ ॥
ತಂದರು ವಿರಹಿಗಳೆಂಬ ಪಶುವ ಬೇಗ । ಬಂಧಿಸಿದರು ಲತೆಗಳಲಿ ॥೬೮

ದೀಕ್ಷೆಯ ಕೈಕೊಂಡು ಬಳಲಲದೇಕೆ ತಾ । ಸಾಕ್ಷಾದ್ವಿಷ್ಣುವಿಲ್ಲಿರಲು ॥
ಈಕ್ಷಣದೊಳು ಸ್ವರ್ಗಸುಖವನಿಲ್ಲೀವೆನೆಂ । ದೀಕ್ಷಿಸಿದನು ಕೃಷ್ಣ ಕೊಳಲ ॥೬೯

ಇಂದಿರೇಶನು ಕೊಳಲೂದಲಾಗಸದೊಳು । ಸಂದಣಿಸುತ ಸುರನಿಕರ ॥
ಅಂದಮಗವ್ಯ ತವಿತ್ತುದು ಪುಸಿ ಕೊಳಲಿನ । ರಂಧ್ರದೊಳಿದೆಯೆಂದರಾಗ ॥೭೦

ಆವ ಸ್ವರ್ಗದೊಳಾದೊಡೆಯು ದೊರಕುವುದೆ ಮ । ತ್ತೀವೇಣುರವಸುಧಾಪಾನ ॥
ಸ್ಥಾವರಜಂಗಮಸಹಿತ ಗೋಕುಲದೊಳು । ಪಾವನವಾದುದೇನೆಂಬೆ ॥೭೧

ಇಂತೀಶ್ರೀ ಶೃಂಗಾರಪ್ರಥಮಸಪ್ತತಿ ಸಂಪೂರ್ಣಂ.



## —ಶೃಂಗಾರ ದ್ವಿತೀಯಸಪ್ತತಿ—

ಒಂದು ದಿವಸಯಿಂದಿರೇಶ ರಾತ್ರಿಯೊಳು ಕಾ | ಳಿಂದಿಯೊತ್ತಿನ ಬನದೊಳಗೆ ॥
ಇಂದುವಿನುದಯದಿ ಕೊಳಲನೂದುತಲಿ ಗೋ | ವಿಂದ ಮೋಹಿಸಿದನೀಜಗವ ॥೧

ವೇಣುನಾದವನು ಕೇಳುತಲಿ ಮದನಚೋರ | ನೇಣಾಂಕನೆಂಬ ಕನ್ನದೊಳು ॥
ಮಾಣದೈತಂದು ಚಂದ್ರಿಕೆಯ ಬೆಳುವೆಯಿಟ್ಟು | ಕೇಣಿಗೊಂಡನು ಗೊಲ್ಲಪುರವ ॥೨

ಕಳವಳದಿಂ ತುರುಗಾತಿಯರ್ಬಳಲಿ ತಾ | ವೆಲರಂಬನಸ್ತ್ರಹತಿಯೊಳು ॥
ಸಿಲುಕುವಿಂದ್ರಿಯಕರಣಗಳನಚ್ಯುತಪಾದ | ಜಲಜದೊಳ್ಬಚ್ಚಿಟ್ಟರಾಗ ॥೩

ಮನವು ಮಾಧವನ ಪಾದವ ಬಿಡಲಾರದು | ಮನವ ಬಿಟ್ಟಿರವಿಂದ್ರಿಯಗಳು ॥
ತನುವು ಮನವ ಬಿಡಲರಿಯದದರಿಂ ಗೋಪ | ವನಿತೆಯರೈದಿದರ್ಬನವ ॥೪

ಬಟ್ಟಮೊಗದೊಳಿಟ್ಟ ಬಟ್ಟುಕತ್ತುರಿಯಿಂದೆ | ಯಿಟ್ಟಣಿಸುವ ಪಯೋಧರದ ॥
ನಿಟ್ಟಿಸಲಸದಳವೆನಿಪ ಮಧ್ಯದ ಮಳ | ಲೊಟ್ಟಿಲಂದದ ಜಘನಗಳ ॥೫

ಕಟ್ಟುನಿರಿಯ ದುಗುಲದ ನಳಿತೋಳಿಂಗೆ | ತೊಟ್ಟ ಕಂಚುಕದ ಬಿಗುಹಿಂ ॥
ಬಟ್ಟವಿಡಿದು ನಡೆತಂದರಾ ಮದನನ | ಪಟ್ಟದಾನೆಗಳೆಂಬ ತೆರದಿ ॥೬

ಹರನಿಂದ ಸ್ಮರನಳಿಯಲು ಮತ್ತವರ ಮಾವ | ನರಸಾಗಿ ವಿಟವಿರೋಧಿಗಳ ॥
ತರುಬುವ ಶಶಿಕರಶರಗಳಂತೈದಿದ | ತರುಣಿಯರ್ಬೆಳದಿಂಗಳಿನೊಳು ॥೭

ಇಂಗಡಲಮಳತರಂಗಗಳೆನಿಸೆ ಗೋ | ಪಾಂಗನಾಪಾಂಗವೀಚಿಗಳು ॥
ಇಂಗದಿರನ ಬೆಳಗನೊಳು ಪೊಳೆದುದು ತಿ | ಮಿಂಗಿಲನಂತೆ ನೇತ್ರಗಳು ॥೮

ಆರಾಮದೊಳಗೈದುತಾ ರಾಮಾಮಣಿಗಳಂ | ದಾರಾಮಾನುಜನನರಸುತ ॥
ಆರಮಣೀಯಗುಣಂಗಳ ಪೊಗಳುತ | ಲಾರಮಾಪತಿಯ ಧ್ಯಾನಿಸುತ ॥೯

ಇಂದುವ ನೋಡಿ ನಿಂದಿಸಿದಳ್ಗೋಪಾಂಗನೆ | ಯಿಂದೀವರಾಪ್ತನೆ ನೀನು ॥
ಇಂದು ನಿನ್ನನು ನೋಡಲಣ್ಮದೆಮ್ಮಯ ನಯ | ನೇಂದೀವರಗಳು ಬಾಡುತಿವೆ ॥

ಪೊಂದಾನಿಲನ ಕುರಿತೆಂದಳಂಗನೆಯೊರ್ವ | ಳಿಂದೆಮ್ಮ ಸುಂದರಾಂಗವನು ॥
ಪೊಂದಿವಾಳದಲಿ ನೋಂಕಲು ಜಡೆಯೊಲರುಣಿ | ತಿಂದುಕೊಳ್ಳದೆ ಮಾಣದೆನುತ ॥೧೧

ದಕ್ಷಿಣಾನಿಲ ನೀನಿಕ್ಷುವಿಲ್ಲನ ಕೂಡಿ | ಪಕ್ಷಪಾತದೊಳೆಮ್ಮ ಕೊಲುವೆ ॥
ಲಕ್ಷ್ಮೀಪತಿಯು ಕಾವ ತನಕ ಸೈರಿಸಿ ಮತ್ತೆ | ಶಿಕ್ಷಿಪೆ ಮನಕೆ ಬಂದಂತೆ ॥೧೨

ಮಾರಭೂಪಾಲ ವಸಂತಕನೊಡಗೂಡಿ | ಸ್ವಾರಿಯ ತೆರಳಿ ಬೀದಿಯೊಳು ॥
ಭೂರಿಬಲಂಗಳಾವರಿಸಿ ತಾವರೆಯೊಳು | ಸೂರೆಗೊಂಡರು ವಿರಹಿಗಳ ॥೧೩

ಪೇರು ಧನುವಮಾಡಿ ನಾರಾಯಣಾಸ್ತ್ರದಿಂ | ದೂರಗೆದ್ದನು ಹರ ಮೂರ ॥
ಮೂರು ಲೋಕವ ಜಯಿಸಿದ ಪೂವಿಲ್ಲಿನಿಂ | ಮಾರನೆ ಶೂರನೀಧರೆಗೆ ॥೧೪

ಪೆರೆದಲೆಯನ ಕಣ್ಣಿಂದುರಿದನೆಂಬುದ ಕೇಳಿ | ಹರುಷದಿಂದಿರ್ದೆವಿನ್ನೆವರ ॥
ಮರಳಿ ಬಂದೀಗ ನೀ ಕೊರಲನರಿವೆ ಕಾಮ | ತರವೆ ಹೆಂಗೊಲೆ ಸುಭಟರಿಗೆ ॥೧೫

ಅಂಗವಲ್ಲಿದು ವೀರರಂಗಕ್ಕೆ ಕೊರತೆ ನೀ | ನಂಗಹೀನನು ಜಗವರಿಯೆ ॥
ಅಂಗನಾಮಣಿಗಳುಸಿರು ತಾಕಿ ಹಿಂಗಲ | ನಂಗನೆಂದಭಿಧಾನವಾಯ್ತು ॥೧೬

ಮಲ್ಲಿಯೆಂಬವಳೊರ್ವಳಲ್ಲನಿ ನುಡಿದಳಾ | ಮಲ್ಲಿಗೆಯಲರ ತಾ ಕಂಡು ॥
ಮಲ್ಲಿಗೆಂದೇ ಮಸೆದಿರಿಸಿದ ಕಾಮನೀ | ಮಲ್ಲಿಗೆಯೆಂಬಂಬನೆನುತ ॥೧೭

ಮಾರನ ತೇರುವೆಸರನಿಟ್ಟ ಜಾಣರ | ದಾರೊ ಧರೆಯೊಳೀತರುವಿಗೆ ॥
ದೂರದಿಂ ನೋಡೆ ತೇರಂತೆ ಸೂಚಿಸುತಿದೆ | ಪೇರುಸಲುವುದು ಕಿಂಶುಕಗೆ ॥೧೮

ತಾಕಿದ ಬಾಣ ಕೊಲ್ಲದೆ ಹುಸಿಪೆಟ್ಟಾಗೆ | ಶೋಕಪಡುವರು ಗಾಯದೊಳು ॥
ನೋಕಿದಾಕ್ಷಣ ಹರಣವ ಕೊಂಬ ಸರಳನ | ಶೋಕವೆಂಬರು ಲೋಕದೊಳಗೆ ॥

ಚೈತ್ರಜಬತ್ತಳಿಕೆಯೊಳು ಪೊರಡುವಂಬ | ಮೊತ್ತವೆಂಬಂತೆ ಪಾದರಿಯ ॥
ಮುತ್ತಿಯಾಗಸಕೆ ಬೆಗಿವ ಶಿಳೀಮುಖವ ಕಾ | ಣುತ್ತಲಂಜಿದರಬಲೆಯರು ॥೨೦

ಪಂಚಬಾಣನ ಕೈಯ ಮಿಂಚುವಸಿಯುಪಿಡಿ | ಯಂಚುಗೊಂಡೆಯುಗಳೆಂಬಂತೆ ॥
ಚಂಚಲಾಕ್ಷಿಯರ ಕಣ್ಗೆಸೆದುದು ಬನದಿ ಪೂ | ಗೊಂಚಲು ಲತೆಯೊಳಲ್ಲಲ್ಲಿ ॥೨೧

ಸ್ಮರನ ಕೈಯಂಬಿನ ಮುಂಬಲಗೆಂಬಂತೆ | ಕುರುವೊನೆಯಿಸಳಿ ಧಾರೆಗಳ ॥

ಕರವೀರಪತ್ರಗಳನು ಕಂಡು ಮರುಗಿದ । ತರ್ರುಣಿಯರಾಬನದೊಳಗೆ ॥೨೦

ಕಿರುನಗೆಯೆಂಬ ನೊರೆಯು ಬೆಳ್ಪು ಸೊಬಗನ । ತೆರೆಯೆಂಬ ನಳಿತೋಳ್ಗಳಾಗೆ ॥
ಸಿರಿಗಂಗಳೆ ಮತ್ಸ್ಯ ವರನಾಭಿ ಸುಳಿಯಾಗೆ । ಮೆರೆದಳಂಗನೆಯವೊಲ್ ಯಮುನೆ ॥

... ... ... ... ... ...

ಶಶಿಮುಖಿಯಂಗದೊಳೆಸೆವ ಸ್ವೇದಾಂಬು ತಾ । ಮುಸುಕಿತು ನವಿರನೆಂಬಂತೆ ॥
ಪೊಸನೀರು ನದಿಯೊಳು ನಸುಪೆರ್ಚೆ ದಡದ ಪು । ಲ್ವಸಲೆಯ ಮರಸಿತಲ್ಲಲ್ಲಿ ॥೨೫॥

ಆಗವೊರಣ್ಯದೊಳರಸಿ ಕಾಣದ ಕಡು । ಯೋಗಿಗಳಂತೆ ಕಾಂತೆಯರು ॥
ನಾಗವಕ್ಕೆಗನನರಸಿದರು ಬನದೊಳು । ನಾಗಗಮನೆಯರೊಗ್ಗಿನಲಿ ॥೨೬

ಕಾಂತಾರದೊಳು ಗೋಪಕಾಂತಾಮಣಿಗಳು ಶ್ರೀ । ಕಾಂತನನರಸಿ ಬಳಲುತ ॥
ಮಾಂದಳಿರಂತೆ ಬಾಡುತಲಿ ನಿತಾಂತಲ । ತಾಂತಮಂಟಪವನ್ನೈದಿದರು ॥೨೭

ಕಂಡರಾಗೋಪಮಾನಿನಿಯರು ಭುವನೋ । ದ್ದಂಡದೈವಗಳ ದೇವತೆಯಾ ॥
ಪುಂಡರೀಕಾಪ್ತನ ಮಗಳ ಮಗ್ಗುಲನೈದಿ । ಪುಂಡರೀಕಾಕ್ಷ ನಿಂದಿರಲು ॥೨೮

ಮೂಡುವ ಶಶಿಯ ಸುತ್ತಿದ ಮೋಡದಂತೆ ಜೋ । ಲಾಡೆ ಮೊಗದಿ ಕುರುಳುಗಳು ॥
ಸೂಡಿದ ಸೋಗೆಗರಿಗಳಿಂದ್ರಚಾಪವ । ನೇಡಿಸುವಂತೆ ರಾಜಿಸಿತು ॥೨೯

ನವಯೌವನೆಯರ ಮನುವೆಯ ಶ್ರೀಕೃಷ್ಣನ । ಕಿವಿಗೆ ಸೂಚಿಸಲೈದುವಂತೆ ॥
ವಿವರಿಸುವಾಯತೇಕ್ಷಣಗಳ ವರ್ಣಿಪ । ಕವಿಯಾವನೀಧರೆಯೊಳಗೆ ॥೩೦

ಮಲ್ಲಿಗೆಲತೆ ಕುಡಿವರಿದು ಸಂಪಗೆಯೆಸ । ಳ್ಳಲ್ಲಿ ಮೊಗ್ಗಾದುದೆಂಬಂತೆ ॥
ಚೆಲ್ವನಾಸಾಗ್ರಮುಕ್ತಾಮಣಿತಿಲಕ ಭ್ರೂ । ವಲ್ಲಿ ರಂಜಿಸಿತು ಶ್ರೀಹರಿಯಾ ॥೩೧

ತಿಂಗಳಬೆಳಗುಮೀರುವ ಸುಸ್ಮಿತದ ದಾಡಿ । ಮಂಗಳಂದದ ದಂತರುಚಿಯಾ ॥
ಮಂಗಳಾಧರದ ಪೊಂಗೊಳಲ ಸೊಬಗು ಮೂಜ । ಗಂಗಳ ಮೋಹಿಸುತಿಹುದು ॥
ಅರ್ಣವಶಯನನ ಕರ್ಣಯುಗದಿ ನವ । ರನ್ನಕುಂಡಲಗಳೊಪ್ಪಿರಲು ॥
ಕನ್ನಡಿಗದಪಿನೊಳಗೆ ಬಿಂಬಿಸುತಲಿ । ಗನ್ನಮಿನ್ನಲೆನೆ ಶೋಭಿಸಿತು ॥೩೨

ಚೆಲ್ವರರಸನ ವೇಣಿಲಿ ... ... ನರಮೃತ । ಚೆಲ್ಲಿ ದೆಸೆಗೆ ತುಂಬಿ ತುಳುಕಿ ॥
ಪಲ್ಲವಾಧರದಿ ಸೇವಿಸಿ ಗಲ್ಲೆಗಟ್ಟಲು । ಗಲ್ಲವೆಂಬಭಿಧಾನವಾಯಿತು ॥೩೪

ಅಂಬುಜವದನನಧರಪಾನವನು ಮಾಳ್ಪೆ । ವೆಂಬ ಧನ್ಯರು ನಾಲ್ವರುಂಟು ॥
ಕಂಬು ಕೊಳಲು ಕಮಲಾದೇವಿ ಗೋಪನಿ । ತಂಬಿನಿಯರಿಗೆ ಪಾಲಾಯ್ತು ॥೩೫

ಉರದೊಳಗಿರ್ದ ವೇಳೆಯ ಕಾಯ್ದಳಿಂದಿರೆ । ಕೊರಳನ್ನೈದಿತು ವರಶಂಖ ॥
ಸರದಿ ಕೊಳಲಿಗಾದುದೆನುತ ಗೋಪಿಯರಾಗ । ಳುರುಬುತಿರ್ದರು ತವಕದಲಿ ॥೩೬

ನಳಿತೋಳ್ಗಳೆಂಬ ವಾಸುಕಿ ಬಿಟ್ಟವನು ಪೊತ್ತು । ಬಳಲುತಂಗುಲಿಮುಖದಿಂದ ॥
ಕೊಳಲ ರಂಧ್ರದ ಸುಧೆಯನು ಸೇವಿಸುವವೊಲು । ಚೆಲುವಭುಜಗಳೊಪ್ಪಿತಾಗ ॥

ಇಂದ್ರನೀಲಾಚಲದೊಳು ಸುರನದಿಯು ತಾ । ಬಂದು ಪ್ರವಾಹಿಸುವಂತೆ ॥
ಇಂದಿರೇಶನ ವಕ್ಷಸ್ಸ್ಥಲದ ಮುಕ್ತಾಹಾರ । ದಂದ ಮೆರೆದುದಿಂದುವದನೆ ॥೩೭

ಇಂದಿರೆಯನು ನೋಡಲೆಂದು ಬಂದಿಂದುವಿ । ನಂದದಿಂ ಪೊಳೆವ ಪದಕವ ॥
ಬಂಧಿಪುದ್ಯುಗದಿ ನಾಭಿಯ ಬಿಲದಿಂ ಪರಿ । ತಂದ ಫಣಿಯೊ ರೋಮರಾಜಿ ॥೩೯

ಮೂರು ತತ್ವದೊಳಡಕವು ಜಗವೆಂಬುದ । ನೋರಂತೆ ಸಾರುವಂದದಲಿ ॥
ತೋರಿ ಸೂಚಿಸಿತು ತ್ರಿವಳಿ ಪೊಡೆಯೊಳು ನೋಡೆ । ಭೂರಿಯಜಾಂಡ ತುಂಬಿ
[ಹುದು ॥೪೦

ಕಟಿತಟದೊಳು ಕಟಿಪುಟಿಯಂತೆಸವ ಪೀತ । ಪಟದ ಕುಚ್ಚೆನ ಸೊಬಗಿಂದ ॥
ಪಟುತರಮಣಿಕಾಂಚೀದಾಮಕಿಂಕಿಣಿಗಳು । ನಟಿಸೆ ನಿತಂಬದೇಶದೊಳು ॥೪೧

ಇಗಿರಿಲ್ಲವೀರೂಪಕೆಂಬ ಜಯಸ್ತಂಭ । ಕದಳಿಯಿಂ ಮೃದುತರೋರುಗಳು ॥
ಮದನನಂಬಿನ ಪೊದೆಗಳನೊದೆಯಲು ಜಂಘೆ । ಯೆದಕೆ ಮೇಲೆನಿಸೆ ಜಾನುಗಳು ॥

ತಾವರೆ ಪದಕೆ ಪಾಸಟಿಯುಂದು ನೋಡಲು । ತಾವರೆಯಾದವೀಯಡಿಗೆ ॥
ಈವಸುಧಾವ್ಯೋಮದಳತೆಗೈದದ ಮೇಲಿ । ನ್ನಾವುದುಪಮೆಯಂಘ್ರಿಗಳಿಗೆ ॥೪೨
ಹರಿಯ ಪಾದವ ಬೊಮ್ಮ ತೊಳೆವಲ್ಲಿ ನಖಕಾಂತಿ । ಬೆರೆದು ಬಂದುದು ಬಾಂಬೊ
[ಳೆಯೊಳು ॥

ಶರಧಿಯೊಳಿರೆ ಮಥಿಸಲು ಶಶಿಯಾಗಿ ತಾ । ಮರಳಿ ಸೇರಿತು ವಿಷ್ಣುಪದವ ॥೪೪
ಮುರುಡುಗಲ್ಲನು ತರುಣಿಯ ಮಾಡಿತೀಪಾದ । ಸುರನದಿಯನು ಪೆತ್ತ ಪಾದ ॥
ದುರುಳಕಾಳಿಯ ಫಣಾಗ್ರದಿ ನಟಿಸಿದ ಪಾದ । ಪರಮಪವಿತ್ರವೀಪಾದ ॥೪೫
ಒಂದು ಪಾದದೊಳು ಮತ್ತೊಂದು ಪಾದವನೂರಿ । ಯೊಂದೆಸೆಗೊಲಿದು ಮಧ್ಯವನು ॥
ಕಣ್ಪೊರೆ ವೇಣುರಂಧ್ರದ ಮೇಲೆ ಪಸರಿಸು । ವಂದದಿ ಕುಡಿಪುರ್ಬು ಕುಣಿಯೆ ॥೪೬
ಕೊಂಕುಕೊರಳಿನ ಬಿಂಕದಿ ಕೊಳಲೂದುತ । ಲೊಂಕಿ ಬಿಡುತ ಬೆರಳುಗಳ ॥
ಕಂಕಣ ಕಡಗ ಝೇಂಕೃತಿಸರಗೂಡುತ । ಪಂಕಜಾಕ್ಷನ ಮೂರ್ತಿ ಮೆರೆಯೆ ॥೪೭
ಕೋಟಿಕಂದರ್ಪರೂಪನ ಕಾಣಲಾಕ್ಷಣ । ನಾಟಿತೆದೆಯೊಳು ಕಾಮಾಸ್ತ್ರ ॥
ನೋಟವೊಡನೆ ಮನ ಸಿಲುಕಿ ಕೃಷ್ಣನಲಿ ಕಾ । ಲಾಟವಡಗಿತಾಕಾಂತೆಯರಾ ॥
ಹದುಳ ತಪ್ಪಿತು ಮನ ತೊದಲನೈದಿತು ನುಡಿ । ಕೆದರಿ ಭ್ರಮಿಸಿತು ನೇತ್ರಗಳು ॥
ಕದುಬು ವೆಗ್ಗಳಿಸಿ ಕಂಪಿಸಿತಂಗವಡಿಗಡಿ । ಗೊದರೆ ನವಿರುಪೆಮರುಗಳು ॥೪೯
ಮಾತನಾಡಲು ಮುಂದುದೋರದು ಚಿತ್ತ ಕಾ । ಮಾತುರ ಸ್ವೈರಣೆಗೊಡದು ॥
ಈತೆರದಿಂ ಬಳಲುವ ಕಾಂತೆಯರ ಕಂಡು । ಮಾತನಾಡಿದನಸುರಾರಿ ॥೫೧
ಏನು ಬಂದಿರಿ ಮಾನಿನಿಯರು ರಾತ್ರಿಯೊಳಿಲ್ಲಿ । ಕಾನನಾಂತರಕೆ ನೀವೆನಲು ॥
ಮೌನದಿಂ ನೆಲವನುಂಗುಟದಿ ಬರೆಯುತ ಮ । ತ್ತಾನಂದಾಶ್ರುಗಳ ಸುರಿಯಲು ॥
ಭಾವವ ತಿಳಿದು ನೇಮಿಸಿದನವರೊಳು ಮ । ತ್ತೀವಗೆ ತೆರವಲ್ಲ ನಿಮಗೆ ॥
ಭಾವಿಸಿ ನೋಡೆ ಪತಿಯೆ ದೈವ ಸತಿಗೆ ನೀ । ರಾವ ಕರ್ಮದ ಗತಿಯುಸುವು ॥೫೨
ಪಾತಿವ್ರತ್ಯವಳಿವರೆ ಪರಲೋಕಕ್ಕೆ । ಘಾತಕರಹಿರಿ ನೀವಿನ್ನು ॥
ಮಾತನಾಡದೆ ಮನೆಗೈದುವುದೆನಲು ಮ । ತ್ತಾತರುಣಿಯರೆಂದರಾಗ ॥೫೩
ಪರಪುರುಷರನು ಬಯಸಲಿಲ್ಲ ಸಾಕ್ಷಾತ । ಪರಮಪುರುಷನ ನಂಬಿದೆವು ॥
ಪೆರವನೊಲ್ಲೆವು ನಿಮ್ಮ ಚರಣವೆ ಸಾಕೆಮ । ಗೊರೆಯದಿರಿ ಪುರಾಣಗಳನು ॥೫೪
ವಾರಿಜಭವಭವಸನಕನಾರದರು ಮ । ತ್ತಾರ ಪಾದವ ಭಜಿಸುವರು ॥
ನೀರ ಬಲ್ಲರಿಗೆಲೆಯನು ತೋರದಿರು ಕೃಷ್ಣ । ತೀರದೀಮಾಯವೆಮ್ಮೊಡನೆ ॥೫೫

ಅಂಬುಜಾಂಬಕೆ ನಿನ್ನ ಸ್ಮರಿಸೆ ಪತಿವ್ರತೆ । ಯೆಂಬಂತೆ ಪರಪುರುಷರನು ॥
ಪಂಬಲಿಸಿದರೆ ಪಾದರದ ಪೆಣ್ಣಿವಳೆಂದು । ಮುಂಬಲ್ಲಕಿಳರೆ ಬಲ್ಲವರು ॥೫೬

ಧಾರಿಣೀಪತಿ ಪರಿಗ್ರಹಿಸೆ ಬಳಿಕ ತಳೆ । ವಾರರಿಂದಹ ಕಾರ್ಯವೇನು ॥
ಈರಹುಣೀಯುಮೂರ್ತಿಯ ಕಂಡಧನ್ಯರ । ದಾರಿವಿಡಿವುದೆ ಪಾತಕವು ॥೫೭

ಕೆಡಿದ ಕೈಯಂಗವೀನವು ಲಭಿಸಲು ನೀರ । ಕೆಡಿದು ಬರುವ ಭಾಗ್ಯವೇನು ॥
ಒಡವೆ ಕೈಸೇರಿದ ಬಳಿಕ ನೆಲದಿ ಬರಿ । ಹುಡಿಯ ತಡಕಿ ಬಳಲುವರೆ ॥೫೮

ಯಾಗಯಜ್ಞಾದಿಕರ್ಮಾದಿ ಬಹ ಫಲವು ತಾ । ನಾಗಿ ಸಿದ್ಧಿಸಿದ ಮೇಲಿನ್ನು ॥
ಯೋಗಾನಂದವನನುಭವಿಸದೆ ಕರ್ಮದ । ಬೇಗೆಯಿಂ ಬಹ ಫಲವೇನು ॥೫೯

ಬಹಳ ಬಿನ್ನವಿಸಲೇತಕೆ ಚಿತ್ತವರಿಯದೆ । ಸಹಜವೆಂಬುದನಂತರಾತ್ಮ ॥
ವಿಹಿತವಿಲ್ಲೆಂದುಪೇಕ್ಷಿಸಿ ದೇಹವನು ಬಿಟ್ಟು । ಸಹಿಸಿ ನಿನ್ನೊಳು ಬೆರಸುವೆವು ॥೬೦

ಎನಲು ಗೋಪಿಯರ ನಿಜವ ಕಂಡು ಕೃಷ್ಣ ತಾ । ನನುಪಮಾನಂದವಾರ್ಧಿ [ಯೊಳು ॥
ನನಸಿ ತಕ್ಕೈಸಿ ಕೆಂಬನಿಯನೊರಸಿದ ತಾ । ನೆನಿತೊ ಕಾಂತೆಯರ ಸೌಭಾಗ್ಯ ॥

ಆವನ ಪದವನರಸಿ ಕಾಣಲಾರದೆ । ದೇವರು ತಪವನಾಚರಿಸಿ ॥
ಈವನಿತೆಯರ ಪುಣ್ಯದ ಕಡೆಮೊದಲು ತಾ । ನಾವುದೆಂಬುದ ಬಲ್ಲರಾರು ॥೬೨

ರಂಗನ ವಾಕ್ಯಸುಧಾಪೂರಾವಾರತೆ । ರಂಗದೊಳಾಳಿ ಮುಳುಗುತ್ತ ॥
ಅಂಗನಾಮಣಿಗಳಾಲಿಂಗನಗೈದು ನೀ । ಲಾಂಗನ ಸುತ್ತುವರಿದರು ॥೬೩

ನಿಗಮಶಿರೋಮಣಿಯೆಂಬಿಂದ್ರನೀಲಕೆ । ಬಿಗಿದ ಕುಂದಣಗಳೆಂಬಂತೆ ॥
ಬಿಗಿಯಪ್ಪಿ ಕೃಷ್ಣಮೂರ್ತಿಯೊಳಾನಂದಿಸಿದರು । ಮೃಗನಯನೆಯರೆಡೆಬಿಡದೆ ॥

ಮಾಧವ ವೇದಪಾದಪವಾಗೆ ಗೋಪಿಯ । ರಾದರಾಶಾಖೆಗಳಂತೆ ॥
ಮಾಧುರ್ಯವೇಣುರವಾಮೃತಸ್ವರವೆನೆ । ಲಾದಿಪುರುಷನೆಸೆದಿರ್ದ ॥೬೫

ಒಬ್ಬ ಕೃಷ್ಣಗೊಬ್ಬ ಗೋಪಕಾಮಿನಿಗೊಬ್ಬ । ಶ್ರೀಪತಿಯೀಪರಿಯೆನಿಸಿ ॥
ಒಬ್ಬರೊಬ್ಬರನು ಕೈವಿಡಿದು ಮಂಡಲದಂತೆ । ವ್ಯಾಪಿಸಿ ಸುತ್ತುವರಿದರು ॥೬೬

ಅನಿತು ಗೋಪಿಯರಿಗನಿತು ಕೃಷ್ಣನಾದನು । ಕನಕನೀಲದ ಮಣಿಗಳನು ॥
ಮಣಿತೆ ವಲ್ಲಭಭುಜಸೂತ್ರಗರ್ಭಿತವಾಗಿ । ರ್ದನುಪಮೈಕಾವಳಿಯಂತೆ ॥೬೭
ಮಂಡಲಮಧ್ಯದೊಳಗೆ ನಿಂದು ಹರಿ ಹರಿ । ಮಂಡಲಾಂತರ್ವರ್ತಿಯಂತೆ ॥
ಪುಂಡರೀಕಾಕ್ಷನಾಡಿದನು ರಾಸಕ್ರೀಡಾ । ತಾಂಡವನೃತ್ಯಲೀಲೆಗಳಾ ॥೬೮
ಕುಂಜರಗಾಮಿನಿಯರ ಕರರಂಜಿಪ । ಮಂಜೀರಜಾನುಕಂಕಣದ ॥
ಜಂರ್ಝಣತ್ಕಾರರವಂ ಜತೆಗೂಡೆ ತಾ । ರಂಜಿಸಿತಾವೇಣುನಿನದ ॥೬೯
ಇಂತಾಡುತಿರೆ ಗೋಪಕಾಂತೆಯೊರ್ವಳು ತಾನೇ । ಕಾಂತವಾಡುವ ವ್ಯಾಜದಿಂದ ।
ಕಂತುಪಿತನ ಕದಪನು ಚುಂಬನಂಗೈದ । ಳೆಂತೊ ಕಾಮಿನಿಯ ಸೌಭಾಗ್ಯ ॥೭೦
ನೃತ್ಯದೊಳಂಗನೆ ತತ್ತರಿಸಲು ಕೃಷ್ಣ । ನೆತ್ತಲದೆ ವ್ಯಾಜದಿಂದ ॥
ವೃತ್ತಕುಚವನೆದೆಗೊತ್ತಿ ತೆಕ್ಕವಿಸಿದ । ಳುತ್ತರಿಗೆಯು ಜಘನಗಳ ॥೭೧
... ... ... ... ... ... ॥೭೨

ಇಂತೀ ಶ್ರೀಶೃಂಗಾರದ್ವಿತೀಯಸಪ್ತತಿ ಸಂಪೂರ್ಣಂ.



## —ಶೃಂಗಾರ ತುರೀಯಸಪ್ತತಿ—

———o———

... ... ... ... ... ... ...

... ... ... ... ... ... ...

ಇಂತು ಕಾಂತೆಯರ ಗರ್ವವ ಕಂಡು ಕೃಷ್ಣ ತಾ । ನಂತರ್ಧಾನವನು ಕೈಕೊಂಡ ॥
ಕಾಂತಾರಮಧ್ಯದೊಳಗೆ ಕಾಂತಾಮಣಿಗಳು । ಭ್ರಾಂತರಾದರು ಮರುಕೊಳಿಸಿ ॥

ಸಿರಿ ಕೈಸೇರಿದುದೆಂದು ಗರ್ವಿಸಿ ಮುನ್ನ ತ । ನ್ನಿರವನು ಮರೆತು ಬಾಲಕರ ॥
ಪರಿಯುನರಿಯದಪರಾಧಗೈವನ ಸಿರಿ । ಸರಿದುದೆಂಬಂತಾದರಾಗ ॥೬೭

ಲೇಸುದಪ್ಪಿದ ವೇಳೆಯೊಳು ಲೋಗರೊಳು ತಮ್ಮ । ಕ್ಲೇಶವನರಿಪುವಂದದಲಿ ॥
ಆಸುದತಿಯರು ಪಂಬಲಿಸುತಿರ್ದರು ವನ । ವಾಸಚರಾಚರದೊಡನೆ ॥೬೮

ಮಾಮರಗಳಿರೆಮ್ಮವೊಲು ನಿಮ್ಮಂಗದಿ । ಕಾಮಬಾಣಗಳೊದವಿದಕೊ ॥
ತಾಮರಸಾಕ್ಷನ ಕಂಡಿರೆಯೆನುತಲಾ । ಸೀಮಂತಿನಿಯರು ಕೇಳುವರು ॥೬೯

ಮೃಗವಧುಗಳಿರಘಹರನ ಕಂಡಿರೆ ನಿಮ್ಮ । ದೃಗುಯುಗ ಡಿದರುತೆಮ್ಮಂತೆ ॥
ದಿಗುವಿವರವನೀಕ್ಷಿಸುವವಾರನೆನುತಲಾ । ಮೃಗನೇತ್ರೆಯರು ಕೇಳುತಿಹರು ॥೭೦

ಅರವಿಂದಗಳಿರ ಭಕ್ತಿಯೊಳು ನೀವಾರಿಗೆ । ಕರಗಳ ಮುಗಿದು ನಿಂದಿಹಿರಿ ॥
ಪರಮಪುರುಷನ ಕಂಡಿರೆ ನೀವೆನುತ ಗೋಪ । ತರುಣಿಮಣಿಗಳು ಕೇಳುವರು ॥೭೧

ಅತ್ತಲಾಗೋಪಕಾಮಿನಿಯೊರ್ವಳೊಡಗೂಡಿ । ಚಿತ್ತಜಪಿತ ನಾಡುತಿರಲು ॥
ಮತ್ತಕಾಸಿನಿಯರರಸುತ್ತೈದುತಿರೆ ನದಿ । ಯೊತ್ತಿನೊಳ್ಕಂಡರಡಿಗಳ ॥೭೨

ಇದೆ ಕೃಷ್ಣನ ಪಾದಾಂಕಿತವಿದೆಯುಂಕೆಳ । ಪದುಮಧ್ವಜದ ಕುರುಹಿದೆಕೊ ॥
ಸುದತಿಯಾವಳೊ ಕಾಂತನೊಡನೈದಿದಳು ಪಜ್ಜೆ । ಯಿದೆಯೆಂದರಾ ಚದುರೆಯರು ॥

ಎನುತಲಾಪದವನೆದೆಯೊಳೊಪ್ಪಿ ಮರಗುತ । ಘನತಾಪದಿಂ ಬಸವಳಿದು ॥
ಬನದೊಳು ಕಾಮಕೇಸರಿಗೊಪ್ಪಿಸದಿರೆಮ್ಮ । ನನುಪಮೆಯೆಂದಳಲಿದರು ॥೭೩

ಪಂತ ಸಂದುದೆ ನಿಮ್ಮ ಪಿಣನೆಂದು ಕಾಮ ವ । ಸಂತ ಸಂತಸವಾಯ್ತು ನಿನಗೆ ॥
ಇಂತೆನುತಬಲೆಯರಚ್ಯುತಕಾಂಘ್ರಿಯೊಳು ಹಾ । ಕಾಂತೆಯೆಂದೊರಗಿದರಾಗ ॥೩೬

ಅತ್ತಲಚ್ಯುತನೊಡನೈದಿದಬಲೆ ತಾನೆ । ಉತ್ತಮೆಯನಿಬರೊಳೆನುತ ॥
ಚಿತ್ತಜಪಿತನೊಳಗಾಡಿದಳಾ ಗೋಪ । ಮತ್ತಕಾಶಿನಿ ಗರ್ವದಿಂದ ॥೩೭

ಅತಿಮೃದುವಾದೆನ್ನಂಘ್ರಿಗಳು ಕಾಂತಾರದ । ಕ್ಷಿತಿಯೊಳೊರಲು ಪದಗತಿಗೆ ॥
ಮತಿಯೊಳು ಮರುಕವಿಲ್ಲೆಲೆ ಕೃಷ್ಣ ನಿನಗೆಂದಾ । ಸತಿ ನುಡಿದಳು ಹರಿಯೊಡನೆ ॥

ಎನಲು ಮಾಯಾಧೀಶನೆಂದನಬಲೆಯೊಡ । ನಿನಿತುವರಿಯೊಳೆಚ್ಚರಿಸಿದೆ ॥
ವನಜಾಕ್ಷಿ ಬಳಲಿದೆ ಬಾಯೆನ್ನ ಭುಜವನೇ । ರೆನುತ ವಿನಯದಿ ಮಂಡಿಸಿದ ॥೩೮

ಕಾಂತೆ ಮೆಲ್ಲನೆ ಸಂವರಿಸಿದಳು ನೆರಗ ಶ್ರೀ । ಕಾಂತನ ಭುಜವನೇರುವರೆ ॥
ಸಂತಸದಿಂದಡರುವ ವೇಳೆಯೊಳು ಕೃಷ್ಣ । ನಂತರ್ಧಾನವ ಕೈಕೊಂಡ ॥೩೯

ಮೃಗನಯನೆಯುಲೊಡನಾಡಲವರು ಬಂದು । ಬಗಲನೇರದೆ ಬಿಡರೆಂಬ ॥
ಬಗೆಯನರಿಪಲಾಮಾನಿನಿಗೆ ಬುದ್ಧಿಯನಿತ್ತು । ನಗಧರ ಜಗದನುಗ್ರಹದಿಂ ॥೪೦

ಜನನಾಥನೊಲುಮೆಯುಳ್ಳಾಗ ತನ್ನವರನು । ಗಣಿಸದಿರಲು ಕಾಲಾಂತರದೆ ॥
ಜನಪ ಮುನಿದ ವೇಳೆಯೊಳು ಲೋಕದಿಂದ ತಾ । ನಳುಕುಗೊಳ್ವನೊಲಾದಳಬಲೆ ॥

ಅತ್ತಲಾವನಿತೆ ಸಮೂಹವನಗಲಿದ । ಳಿತ್ತಲಗಲಿದಳಚ್ಯುತನಾ ॥
ಸುತ್ತಲೆತ್ತಲುಮಿತ್ತಬಾಯೆಂಬರಿಲ್ಲದೆ । ಲುತ್ತಮಿರ್ದಳು ಕಾಂತೆ ಬನದಿ ॥೪೧

ಇತ್ತಲಾಕಾಮಾವಸ್ಥೆಯೊಳಿರ್ದ ಕಾಂತೆಯು । ರೊತ್ತಿನೊಳ್ ಕೊಳಲ ನುಡಿಸಲು ॥
ಮತ್ತಕಾಶಿನಿಯರೆಚ್ಚತ್ತು ಕಂಡರು ಪ್ರಣ । ತಾರ್ತಿಹರನ ದಿವ್ಯಾಕೃತಿಯಾ ॥೪೨

ಅಗಲಿದ ಸಿರಿ ಕೈಸೇರಿದಪೊಲಾಕಾಂತೆಯು । ರಘುಪರಮೂರ್ತಿಯನಪ್ಪಿ ॥
ದೃಗುಯುಗದೊಳು ಬಾಷ್ಪವುಗಲು ಕಂಠಸ್ವರ । ಬಿಗಿಯೆ ಬಿನ್ನೈಸಿದರಾಗ ॥೪೪

ಆರಿಗಾವಸರಾಧಿಗಳು ದೇಹೇಂದ್ರಿಯಬುದ್ಧಿ । ಯಾರ ಸೂತ್ರದೊಳಾಡುತಿಹುದು ॥
ಆರನಾರೈಸುವುದೀಜೀವ ಬರಿದೆ ನೀ । ನಾರ ಮುನಿವೆ ಕೃಷ್ಣಯೆನಲು ॥೪೫

ಅಂತರಾತ್ಮಕನೆಂಬುದನು ಕಂಡ ಬಳಿಕ ವಿ । ಭ್ರಾಂತಿಯಿಂದೇಕೆರಸುವಿರಿ ॥

ಕಾಂತೆಯರಿರ ನಿಮ್ಮ ನಗಲುವೆನೆಂತೆಂದು । ಸಂತವಿಸಿದ ಕೃಷ್ಣನವರ ॥೪೬

ಇಂತು ಶ್ರೀಕಾಂತನಿವರೊಳಾಡುತಿರೆ ಗೋಪ । ಕಾಂತೆಯೊರ್ವಳೆ ಬನದೊಳಗೆ ॥
ಕಂತುಜನಕನನರಸುತಿರೆ ವೇಣುರ । ವಂ ತಾ ಕೇಳಿಸಿತನಿತರೊಳು ॥೪೭

ಸರವ ಸೆಂಬಳಿಗೊಂಡೈದುವಳಲ್ಲಿ ಕಾಣದೆ । ಯಿರಲು ಹಂಬಲಿಸಿ ಬಳಲುವಳು ॥
ಕರುಣಾರ್ಣವನೆಯೆಂದು ಕರೆಯುತ್ತಿತರೆ ಮುಂದೆ । ನೆರವಿ ಕಾಣಿಸಿತು ಗೋಪಿ
[ಯರ ॥೪೮

ಬಂದಳಾತರುಣಿ ಗೋವಿಂದನಂಘ್ರಿಯುಸಶ್ರು । ಬಿಂದುಗಳಿಂ ತೊಳೆಯುತಲಿ ॥
ಚಂದನತಿಲಕಮುಡಿದಪೂಸರಗಳಿಂದ । ಬಿಂದುವದನೆ ಪೂಜಿಸಿದಳು ॥೪೯

ಪದುಮಾಕ್ಷನಾ ಮಾನಿನಿಯನು ಸಂತವಿಸುತ । ಸುದತಿಯರೊಡನೆಂದನಾಗ ॥
ಇದುವೆ ಸಮಯ ಜಲಕೇಳಿಗೆ ನಿರ್ಮಲ । ದುದಕವಿದೆಕೊಯೆಂದ ನಗುತ ॥೫೦

ಎನಲು ಕೇಳದನು ಕಾಮಿನಿಯರು ಕಾಳಿಂದಿಯ । ನನುಸಮನೀಲಾಂಗನೆಂಬ ॥
ಘನವರ್ಷಾಂಬುಪ್ರವಾಹದಂತಿಹ ನದಿ । ಯೆನುತೆ ಬಂದರು ಹರಿಯೊಡನೆ ॥೫೧

ಅಂಬುಜಾಂಬಕನಿಳಿದನು ಸಲಿಲದೊಳು ನಿ । ತಂಬಿನಿಯರನೊಡಗೂಡಿ ॥
ಅಂಬುಜಸಂಸಕಾರಂಡಕುಮುದತತಿ । ತುಂಬಿದಂಬುವಿನೊಳಾಡಿದನು ॥೫೨

ರಂಗನಂಗಸ್ಪರ್ಶದಿಂ ನಳಿನನಿತೆ ತ । ರಂಗಭುಜಂಗಳಿಂದೊಲಿದು ॥
ಸಂಗಸುಖವನು ಸಾರೂಪ್ಯವನಿತ್ತು ಸೀ । ಲಾಂಗನ ಯಮುನೆ ಸಂತೈಸಿ ॥೫೩

ಆದುದಚ್ಯುತಜಲಕೇಳಿ ಗೋಪಿಯರು ವಿ । ನೋದದಿಂದುಟ್ಟರಂಬರವ ॥
ಮಾಧವನೊಡನಾಡುತಲ್ಲಿ ಬೃಂದಾವನ । ದಿಂದಲೈದಿದರು ಗೋಕುಲಕೆ ॥೫೪

ಎನಲು ಸಾಕ್ಷಾದ್ವಿಷ್ಣುವೆ ಪರವನಿತೆಯ । ರನು ವ್ರತಭಂಗಗೊಳಿಸಲು ॥
ಮನುಜರಿಗನುಗ್ರಹವಾದುದೆಂದಾ ಮನ । ವನಿತೆ ಕೇಳಿದಳು ವಲ್ಲಭನ ॥೫೫

ಎಂದೊಡೆಂದನು ಚೇತನನು ತನ್ನ ಸತಿಗೆ ಗೋ । ವಿಂದನೀಜಗದ ಮಾನವನೆ ॥
ಬಂದೊರೆದಳೆವವನಿಗೆ ದಕ್ಕಿತೆನೆ ನರ । ತಿಂದು ಬಾಳುವನೆ ವಿಷವನು ॥೫೬

ಬೃಂದಾವನದಿ ಹರಿಯೊಡನಾಡುವರು ತಮ್ಮ । ಮಂದಿರಗಳೊಳಾಣ್ಮರೊಡನೆ ॥

ಎಂದಿನಂದದೊಳಿಹರೀ ಗೋಪಿಯರು ಕಾಲ | ವೊಂದರೊಳಚ್ಯುತಾಜ್ಞೆಯಲಿ ||೫೭
ಆರಿಗುಂಟೀಸಾಹಸದ ಪರಿ ಸಾಕ್ಷಾತೆ | ನಾರಾಯಣಗಲ್ಲದಿತರ |
ಜಾರನಬಲೆಯೊಡನಿರುವಲ್ಲಿ ಸತಿಯು ತಾ | ನೀರೆ ತೋರಿಸುವನೆಂತಕಟ ||೫೮

ಗೋಪವಧೂಜಾರನೆಂದು ಸ್ಮರಿಸಿದರೆ | ಪಾಪ ಪೊದ್ದದು ಮನುಜರಿಗೆ |
ತಾಪತ್ರಯಗಳಡಗುವುವು ಮುಕ್ತ್ಯಂಗನೆ | ತಾ ಪರಿಗ್ರಹಿಸುವಳವನಾ ||೫೯

ಕಾಮವಾವುದು ಪರಿಪೂರ್ಣಕಾಮನಿಗೆ ತಾ | ನೇಮವಾವುದು ನಿಯಾಮಕಗೆ ||
ಈಮಾನಿನಿಯರಭೀಷ್ಟವ ಸಲಿಸುವರೆ ನಿ | ಷ್ಕಾಮದಿಂದವರೊಳಾಡಿದನು ||೬೦

ಸೃಷ್ಟಿಗೋಸುಗ ಮಿಥುನದ ವಿಕಾರಗಳ ತಾ | ಕಟ್ಟುಮಾಡಿಸಿದ ಕಾಮನಿಗೆ ||
ಪಟ್ಟದೊಡೆಯನ ತೆರಿಗೆಯು ಕೇಳುವನೆ ತಾ | ನಿಟ್ಟ ಮನುಜನವನಿಯೊಳು ||೬೧

ಸತಿಪತಿಗಳ ದೇಹದೊಳಗಿಹ ಪರಮಾತ್ಮ | ನತುಲಿತಮೂರ್ತಿಯ ವಹಿಸಿ |
ಸತಿಯರೊಳಾಡಿದೊಡಾವುದು ಭೇದ ತಾ | ಪೃಥಗಾತ್ಮನೆಂದೆಣಿಸುವರೆ ||೬೨

ಘಟದೊಳುದಕವ ತರಲು ವರ್ಣಭೇದಸಂ | ಕಟವ ಮುಟ್ಟಲಾಗದೆಂಬಂತೆ |
ಕಟಕಟ ಗಂಗೆಯೊಳಾರಿಗಾವೊಡೆಯುಸಂ | ಘಟಿಪುದೆ ಸ್ಪರ್ಶಭೇದಗಳು ||೬೩

ರತಿನಾಯಕನ ಭೃತ್ಯರಿಗೆ ಗತಿಯಾವುದೀ | ಕ್ಷಿತಿಯೊಳು ಶೃಂಗಾರವೆಂಬ ||
ಮತಿಗೊಂಡಾವರು ಕೃಷ್ಣಕಥೆ ಕಿವಿವುಗಲು ಸ | ದ್ಗತಿಯನೈದುವರವರೆಂದ ||೬೪

ಪತಿತಪಾವನ ಪುಣ್ಯಚರಿತ ಮಾಧವ ಗೋಪ | ಸತಿಯರ ಕೇಳೀವಿಲಾಸ |
ವ್ರತಜಪತಪಶತಕ್ರತುವಮಾಡಲು ಭಾಗ | ವತದೊಳಕ್ಕರಕೆಣೆಯಹುದೆ ||೬೫

ಶುಕಮಹಾಯೋಗೀಂದ್ರರೀಕಥೆಯನು ಹರಿ | ಭಕುತಪರೀಕ್ಷಿತಗೊಲಿದು ||
ಸಕಲಾಗಮಾರ್ಥಸಂಗ್ರಹವಿದೆಂದರಸನೊ | ಳಕಳಂಕಮುನಿಪ ನೇಮಿಸಿದ ||೬೬

ಗಂಗಾದಿಸರ್ವತೀರ್ಥಸ್ನಾನ ಗೋವನಂ | ತಂಗಳ ದಾನನಿತ್ತೊಡೆಯು |
ರಂಗಯೆಂಬೆರಡಕ್ಕರಕೆ ಪಾಸಟಿಯೆ ಮೋಹ | ನಾಂಗಿ ಕೇಳೀರಹಸ್ಯವನು ||೬೭

ಬೇಕೆಂಬ ಪುರುಷಾರ್ಥ ಬಂದು ನಿಮಿಷದೊಳು | ತಾ ಕೈಯ ಮುಗಿದು ಕಾದಿಹದು||
ಕೋಕನದಾಕ್ಷನ ಕೃತಿಯು ಭಕ್ತಿಯೊಳು ವಿ | ವೇಕದಿಂ ಕೇಳ್ವ ಮಾನವಗೆ ||೬೮

ಇದು ಕೃಷ್ಣಗೋಪೀವಿಲಾಸಮೂರ್ತಿಧ್ಯಾನ । ವಿದು ಮುಕ್ತಿಮಾರ್ಗಸೋಪಾನ॥
ಯದುಕುಲೇಶನ ವೇಣುಗಾನಸುಧಾಪಾನ । ಹೃದಯದಿ ನೆಲಸೆ ಸುಮ್ಮಾನ ॥೯

ಶುಕಮುಖಗಳಿತಫಲವನು ವಂಚಿಸದೆ ಮ । ತ್ಸಕರುಂಡು ಸುಖಿಯಾಗಲೆಂಬಾ ॥
ಸಕತಿಯಿಂದೆ ತಿಲಾನವೆಂಬೀ ವ್ಯಾಜದಿ। ಭಕುತವತ್ಸಲ ತಾನೆ ಪೇಳ್ದ ॥೭೦

ಇಂತೀ ಶ್ರೀಶೃಂಗಾರತುರೀಯಸಪ್ತತಿ ಸಂಪೂರ್ಣಂ.

ಕೃಷ್ಣಗೋಪೀವಿಲಾಸಂ

ಸಮಾಪ್ತಂ.

# ಕರ್ಣಾಟಕ ಕಾವ್ಯಕಲಾನಿಧಿ ಗ್ರಂಥಗಳ ಪಟ್ಟಿ.

ಈ ಕೆಳಗಣ ಗ್ರಂಥಗಳೆಲ್ಲವೂ ಪ್ರಾಯಕವಾಗಿ ಕನ್ನಡ ಭಾಷೆಯಲ್ಲಿ ಅತ್ಯುತ್ತಮವಾದುವುಗಳು. ಇವುಗಳಲ್ಲಿ ನಿಘಂಟುಗಳು ಹೊರತು ಉಳಿದ ಗ್ರಂಥಗಳೆಲ್ಲವೂ ಮದ್ರಾಸು, ಬೊಂಬಾಯಿ ಯೂನಿವರ್ಸಿಟಿ ಪರೀಕ್ಷೆಗಳಿಗೂ, ಮೈಸೂರು ದೇಶೀಯ ಪರೀಕ್ಷೆಗಳಿಗೂ, ಬೊಂಬಾಯಾಧಿಪತ್ಯದ ಭಾಷೋಜ್ಜೀವಿನೀ ಪಾಠಶಾಲೆಗಳಿಗೂ ದೇಶಭಾಷಾ ಗ್ರಂಥಗಳಾಗಿ ನಿರ್ಣೀತವಾದುವು.

| ಕವಿಯ ಕಾಲ ಕ್ರಿ. ಶ. | ಕವಿಯೂ ಗ್ರಂಥವೂ | ಕ್ರಯ ರೂ. | ಆ. | ಪೈ. |
|---|---|---|---|---|
| | **ಚಂಪೂ ಗ್ರಂಥಗಳು :—** | | | |
| 993 | ಮಹಾಕವಿ ರನ್ನನ ಗದಾಯುದ್ಧ .. .. | 1 | 6 | 0 |
| 993 | ಮಹಾಕವಿ ರನ್ನನ ಅಜಿತತೀರ್ಥಕರ ಪುರಾಣ ತಿಲಕಂ .. | 1 | 9 | 0 |
| 1105 | * ಅಭಿನವಪಂಪ ಅಥವಾ ನಾಗಚಂದ್ರನ ಮಲ್ಲಿನಾಥಪುರಾಣಂ | | | |
| 1145 | ದುರ್ಗಸಿಂಹನ ಪಂಚತಂತ್ರಂ (ಸಟಿಪ್ಪಣಂ) .. | 3 | 0 | 0 |
| 1165 | * ಹರಿಹರದೇವನ ಗಿರಿಜಾಕಲ್ಯಾಣ .. .. | | | |
| 1170 | ಕವಿಕುಂಜರಾಭಿದ ನೇಮಿಚಂದ್ರನ ಲೀಲಾವತೀ ಪ್ರಬಂಧಂ .. | 3 | 8 | 0 |
| 1170 | ,, ಅರ್ಧನೇಮಿ ಪುರಾಣಂ | 1 | 9 | 0 |
| 1189 | ಅಗ್ಗಳದೇವನ ಚಂದ್ರಪ್ರಭಪುರಾಣಂ—ಅಗ್ಗಳ ಲೀಲಾವತಿ .. | 4 | 0 | 0 |
| 1209 | ಕರ್ಣಾಟಕ ಕವಿ ಚಕ್ರವರ್ತಿ ಜನ್ನನ ಶಾಸನಗಳ ಸಂಗ್ರಹ .. | 0 | 2 | 6 |
| 1209 | ,, ಯಶೋಧರ ಚರಿತೆ, ಸಟಿಪ್ಪಣಂ .. | 1 | 2 | 0 |
| 1235 | ಕಮಲಭವನ ಶಾಂತೀಶ್ವರ ಪುರಾಣಂ .. .. | 4 | 8 | 0 |
| 1235 | * ಆಂಡಯ್ಯನ ಕಬ್ಬಿಗರ ಕಾವಂ, ಸಟಿಪ್ಪಣಂ .. .. | | | |
| 1300 | ಚೌಂಡರಾಯನ ಅಭಿನವ ದಶಕುಮಾರ ಚರಿತೆ .. | 3 | 10 | 0 |
| 1528 | ಅಭಿನವ ವಾದಿವಿದ್ಯಾನಂದನ ಕಾವ್ಯಸಾರಂ .. .. | 2 | 4 | 0 |
| 1700 | ತಿರುಮಲೆಯಾರ್ಯನ ಚಿಕದೇವರಾಜ ವಿಜಯಂ .. .. | 2 | 4 | 0 |
| 1700 | ಚಿಕುಪಾಧ್ಯಾಯನ ದಿವ್ಯಸೂರಿ ಚರಿತೆ .. .. | 1 | 2 | 0 |
| 1700 | ಗೋಪಾಲಪ್ರಸಾದಿಯ ಚಿಕದೇವೇಂದ್ರ ವಂಶಾವಳಿ .. | 0 | 4 | 6 |
| | **ಷಟ್ಪದೀ ಗ್ರಂಥಗಳು :—** | | | |
| 1165 | * ರಾಘವಾಂಕನ ಹರಿಶ್ಚಂದ್ರಕಾವ್ಯ (ವಾರ್ಧಿಕ) .. | | | |
| 1369 | * ಗುಬ್ಬಿ ಮಲ್ಲಣಾರ್ಯನ ಭಾವ ಚಿಂತಾರತ್ನಂ (ವಾರ್ಧಿಕ) .. | | | |

## ಕರ್ಣಾಟಕ ಕಾವ್ಯಕಲಾನಿಧಿ ಗ್ರಂಥಗಳ ಪಟ್ಟಿ

| ಕ್ರಿ. ಶ. | | ರೂ. | ಆ. | ಪೈ. |
|---|---|---|---|---|
| 1424 | ಭಾಸ್ಕರನ ಜೀವಂಧರ ಚರಿತೆ (ಭಾಮಿನಿ) .. .. | 2 | 4 | 0 |
| 1509 | ಮಂಗರಸನ ಜಯನೃಪಕಾವ್ಯ (ಪರಿವರ್ಧಿನಿ) .. | 2 | 8 | 0 |
| 16 ಶ. | ಕನಕದಾಸನ ನಳಚರಿತ್ರೆ (ಭಾಮಿನಿ) .. .. | 0 | 12 | 0 |
| 16 ಶ. | ಗುರುಲಿಂಗವಿಭುವಿನ ಭಿಕ್ಷಾಟನ ಚರಿತೆ, ಸವ್ಯಾಖ್ಯಾನ (ವಾರ್ಧಿಕ) | 1 | 0 | 0 |
| 16 ಶ. | ಕುಮಾರ ವಾಲ್ಮೀಕಿಯ ಮೈರಾವಣನ ಕಾಳೆಗ (ಭಾಮಿನಿ) | | | |
| 17 ಶ. | ತಿರುಮಲೆವೈದ್ಯನ ಉತ್ತರ ರಾಮಾಯಣಂ (ಭಾಮಿನಿ) .. | 2 | 4 | 0 |
| 19 ಶ. | ಮಹಾಲಕ್ಷ್ಮಿಯ ಶ್ರೀರಾಮ ಪಟ್ಟಾಭಿಷೇಕಂ (ವಾರ್ಧಿಕ) .. | 1 | 0 | 0 |
| 17 ಶ. | ಗೋಪಕವಿಯ ನಂದೀಮಹಾತ್ಮ್ಯಂ (ವಾರ್ಧಿಕ) .. | 1 | 0 | 0 |
| 18 ಶ. | ಕೋನಯ್ಯನ ಗಯಚರಿತ್ರೆ (ಭಾಮಿನಿ) .. .. | 2 | 14 | 0 |

### ಗದ್ಯ ಗ್ರಂಥಗಳು :—

| | | | | |
|---|---|---|---|---|
| 17 ಶ. | ತಿರುಮಲೆಯಾರ್ಯನ ಚಿಕದೇವರಾಯ ವಂಶಾವಳಿ ; ಹಳಗನ್ನಡ | 1 | 8 | 0 |
| 17 ಶ. | ಚಿಕುಪಾಧ್ಯಾಯನ ವಿಷ್ಣುಪುರಾಣ, ೧, ೪, ೫, ನೆ ಅಂಶಗಳು | 3 | 4 | 0 |
| 17 ಶ. | ಕನ್ನಡ ವಚನ ಕಾದಂಬರಿ—ಪೂರ್ವಭಾಗ .. .. | 0 | 15 | 0 |
| 17 ಶ. | ಭಾಳಲೋಚನನ ಬತ್ತೀಸಪುತ್ತಳಿ ಕಥೆಗಳು .. .. | 1 | 4 | 0 |
| 19 ಶ. | ಮುದ್ದಣ್ಣನ ಶ್ರೀರಾಮಾಶ್ವಮೇಧಂ (ಹಳಗನ್ನಡ) .. | | | |
| 19 ಶ. | ಅದ್ಭುತರಾಮಾಯಣಂ (ಸಟಿಪ್ಪಣ) ,, .. .. | 0 | 12 | 0 |

### ನಾಟಕ :—

| | | | | |
|---|---|---|---|---|
| 17 ಶ. | ಸಿಂಗರಾರ್ಯನ ಮಿತ್ರವಿಂದಾಗೋವಿಂದ ನಾಟಕಂ .. | 1 | 0 | 0 |

### ನಾಟಕಗದ್ಯಾನುವಾದಗಳು :—

| | | | | |
|---|---|---|---|---|
| 18 ಶ. | ಉತ್ತರ ರಾಮಚರಿತ್ರಕಥೆ .. .. .. | 1 | 8 | 0 |
| 19 ಶ. | ಮುಮ್ಮಡಿ ಕೃಷ್ಣರಾಜ ಒಡೆಯರ ಶಾಕುಂತಳ ನವೀನ ಟೀಕೆ | 1 | 12 | 0 |
| 19 ಶ. | ,, ವತ್ಸರಾಜ ಕಥೆ—ಪೂರ್ವಭಾಗ (ರತ್ನಾವಳೀ ಕಥೆ) | 2 | 0 | 0 |
| 19 ಶ. | ,, ಪ್ರಬೋಧಚಂದ್ರೋದಯ ಕಥೆ (1-3 ಅಂಕಗಳು) | 0 | 12 | 0 |

### ಶತಕಗಳು :—

| | | | | |
|---|---|---|---|---|
| 1165 | ಹರಿಹರ ದೇವನ ಪಂಪಾಶತಕಂ.. .. . | 0 | 3 | 6 |
| | ಸುಭಾಷಿತ ಮುಕ್ತಕಶತಕಂ (ಸಂಕಲಿತ) .. .. | 0 | 3 | 6 |

| ಕ್ರಿ. ಶ. | | ರೂ. | ಆ. | ಪೈ. |
|---|---|---|---|---|
| 17 ಶ. | * ಕವಿಹಂಸರಾಜನ ರತ್ನಾಕರ ಶತಕ .. .. | | | |
| 17 ಶ. | * ರತ್ನಾಕರ ಕವಿಯ ಅಪರಾಜಿತೇಶ್ವರ ಶತಕ .. .. | | | |
| 19 ಶ. | ಶ್ರೀವಾಸನ ವರ್ಷ ವರ್ಧಂತೀ ಶತಕ (ವಾರ್ಧಿಕ ಷಟ್ಪದಿ) .. | 0 | 3 | 6 |

**ಅಲಂಕಾರ ಗ್ರಂಥಗಳು :—**

| | | | | |
|---|---|---|---|---|
| 1150 | ಉದಯಾದಿತ್ಯಾಲಂಕಾರಂ .. .. .. | 0 | 3 | 0 |
| 17 ಶ. | * ತಿರುಮಲೆಯಾರ್ಯನ ಅಪ್ರತಿಮ ವೀರಚರಿತೆ .. .. | | | |

**ರಸಗ್ರಂಥ :—**

| | | | | |
|---|---|---|---|---|
| 12 ಶ. | * ಕವಿಕಾಮನ ಶೃಂಗಾರರತ್ನಾಕರ .. .. | | | |

**ನಿಘಂಟುಗಳು :—**

| | | | | |
|---|---|---|---|---|
| 15 ಶ. | * ಕರ್ಣಾಟಕ ನಿಘಂಟು .. .. .. | | | |
| 15 ಶ. | ಚತುರಾಸ್ಯ ನಿಘಂಟು .. .. .. | 0 | 4 | 6 |
| 15 ಶ. | ಶಬ್ದಸಾರ ನಿಘಂಟು (ಗದ್ಯ) .. .. .. | 0 | 4 | 6 |
| 17 ಶ. | ಸೂರ್ಯಕವಿಯ ಕವಿಕಂಠ ಹಾರ .. .. .. | 0 | 7 | 0 |
| 17 ಶ. | ಕರ್ಣಾಟಕ ಸಂಜೀವನವೆಂಬ ಬಿಡಿಕುಳನಿಘಂಟು .. | 0 | 2 | 6 |

**ಛಂದಸ್ಸು :—**

| | | | | |
|---|---|---|---|---|
| 990 | ನಾಗವರ್ಮನ ಛಂದೋಂಬುಧಿ, ಸಟಿಪ್ಪಣ .. .. | 1 | 8 | 0 |
| 18 ಶ. | ನಂದಿಕವಿಯ ನಂದಿಛಂದಸ್ಸು, ಸವಿವರಣಂ .. .. | 0 | 7 | 0 |

**ವ್ಯಾಕರಣ :—**

| | | | | |
|---|---|---|---|---|
| 12 ಶ. | ನಾಗವರ್ಮನ ಶಬ್ದಸ್ಮೃತಿ (ಅಸಮಗ್ರ) .. .. | 0 | 12 | 0 |

**ಸಾಂಗತ್ಯದ ಹಾಡು :—**

| | | | | |
|---|---|---|---|---|
| 16 ಶ. | ಕನಕದಾಸನ ಮೋಹನ ತರಂಗಿಣಿ .. .. | 2 | 8 | 0 |
| 16 ಶ. | ಪ್ರಧಾನಿ ತಿರುಮಲಾರ್ಯನ ಕರ್ಣ ವೃತ್ತಾಂತ ಕಥೆ .. | 0 | 8 | 0 |
| 17 ಶ. | * ಸಂಚಿಹೊನ್ನಮ್ಮನ ಹದಿಬದೆಯ ಧರ್ಮ .. .. | | | |
| 17 ಶ. | ಕೃಷ್ಣಗೋಪೀವಿಲಾಸ ಅಥವಾ ಕೃಷ್ಣಬಾಲಲೀಲೆ .. | 0 | 8 | 0 |
| 17 ಶ. | ನಂಜಕವಿಯ ಕಪೋತವಾಕ್ಯಂ .. .. .. | 0 | 1 | 0 |

## ಕರ್ಣಾಟಕ ಕಾವ್ಯಕಲಾನಿಧಿ ಗ್ರಂಥಗಳ ಪಟ್ಟಿ

| ಕ್ರಿ. ಶ. | | ರೂ. | ಆ. | ಪೈ. |
|---|---|---|---|---|
| | **ಕೀರ್ತನೆಗಳು :—** | | | |
| 17 ಶ. | ಚಿಕದೇವರಾಯನ ಗೀತಗೋಪಾಲ ಪ್ರಬಂಧ .. | 0 | 12 | 0 |
| 17 ಶ. | ಭಗವದ್ಗೀತಾರ್ಥ ಪ್ರತಿಪಾದನ (ಪ್ರಾಚೀನ ಟೀಕಾಸಹಿತ) | | | |
| 18 ಶ. | ಗಜೇಂದ್ರಮೋಕ್ಷ (ದ್ವಿಪದಿ, ಉದಯರಾಗ) .. .. | 0 | 1 | 0 |
| 18 ಶ. | ಧ್ರುವಚರಿತ್ರೆ (ಉದಯರಾಗ, ವಾರ್ಧಿಕಷಟ್ಪದಿ) .. | 0 | 1 | 0 |
| | **ಮತಗ್ರಂಥಗಳು :—ಗದ್ಯ** | | | |
| 17 ಶ. | ವೇದಾಂತವಿವೇಕಸಾರ, ಪ್ರಥಮಭಾಗ (ಅದ್ವೈತ) .. | 1 | 6 | 6 |
| 17 ಶ. | ಚಿಕದೇವರಾಯ ಬಿನ್ನಪಂ (ವಿಶಿಷ್ಟಾದ್ವೈತ) .. | 0 | 10 | 0 |
| 19 ಶ. | ಜೀವೇಶ್ವರ ಸಾಂಗತ್ಯಂ (ಅದ್ವೈತ) .. .. | 0 | 1 | 0 |

### ಮಂ. ಅ. ರಾಮಾನುಜೈಯಂಗಾರ್ಯರ ನವೀನ ಗ್ರಂಥಗಳು :—

| | | | |
|---|---|---|---|
| ಮಹಾಭಾರತ ಕಥಾಪ್ರಸಂಗ * ಆದಿಪರ್ವ ಮತ್ತು ಸಭಾಪರ್ವ | 0 | 9 | 0 |
| ಕವಿಸಮಯಂ—ಕಾವ್ಯರಸವನ್ನು ಬೋಧಿಸುವ ವಿಮರ್ಶೆ .. | 1 | 4 | 0 |
| ಸುವ್ರತ—ಕರ್ಮವಿಲಾಸವನ್ನು ಬೋಧಿಸುವ ಕಾದಂಬರಿ .. | 0 | 12 | 0 |
| ಕವಿಕಾರ್ಯ ಪ್ರಶಂಶೆ .. .. .. | 0 | 3 | 0 |
| ಪ್ರಮಾಣಪ್ರಮೇಯ ವಿವೇಕ—ಮತಬೋಧಾವತರಣಿಕೆ .. | 0 | 2 | 0 |
| * ಪ್ರಬಂಧಾವಳಿ ಅಥವಾ ಐಹಿಕಸುಖಸಾಧನಂ .. .. | | | |

*N.B.*—* ಈ ರೀತಿ ಗುರುತಿಸಿರುವ ಕೋಶಗಳು ಪುನರ್ಮುದ್ರಣವಾಗತಕ್ಕವುಗಳು.

# ಪ್ರಕಟನೆ.

—:0:—

ಕರ್ಣಾಟಕ ಕಾವ್ಯಮಂಜರಿ ಎಂಬ ನಾನಾವಿಧ ಪ್ರಾಚೀನ ಕಾವ್ಯ ನಾಟಕ ಛಂದೋಲಂಕಾರ ವ್ಯಾಕರಣ ನಿಘಂಟು ವೈದ್ಯ ಜ್ಯೌತಿಷ ಸೂಪಶಾಸ್ತ್ರ ಗ್ರಂಥ ಸಂಗ್ರಹದ ಮಾಸಪತ್ರಿಕೆ.

ವಾರ್ಷಿಕ ಚಂದಾ ಹಾಸಲು ಸಹಿತ    ೩—೮—೦

ಈ ಮಾಸಪತ್ರಿಕೆಯಲ್ಲಿ ಪೂರ್ಣವಾಗಿ ಕ್ರಯಕ್ಕೆ ಸಿದ್ಧವಾಗಿರುವ ಗ್ರಂಥಗಳು.

| | | |
|---|---|---|
| ೧ | ರತ್ನಾಕರಾಧೀಶ್ವರಶತಕಂ, ಅಪರಾಜಿತೇಶ್ವರ ಶತಕಂ | ೦—೮—೦ |
| ೨ | ಕಬ್ಬಿಗರಕಾವಂ, ಟಿಪ್ಪಣಿಯೊಡನೆ ... .. | ೧—೨—೦ |
| ೩. | ಕರ್ಣಾಟಕ ನಿಘಂಟು ... ... .. | ೦—೨—೬ |
| ೪ | ಹದಿಬದೆಯ ಧರ್ಮ ( ಪತಿವ್ರತಾಧರ್ಮ ) .. | ೧—೬—೦ |
| ೫ | ಚತುರಾಸ್ಯ ನಿಘಂಟು .. .. | ೦—೪—೦ |
| ೬. | ಉದಯಾದಿತ್ಯಾಲಂಕಾರ ... ... | ೦—೨—೬ |
| ೭. | ಮಿತ್ರವಿಂದಾಗೋವಿಂದಂ ಟಿಪ್ಪಣಿಯೊಡನೆ .. | ೦—೧೪—೦ |
| ೮. | ಅಪ್ರತಿಮವೀರಚರಿತಂ (ಅಲಂಕಾರ) ... | ೧—೮—೦ |
| ೯. | ಶೃಂಗಾರರತ್ನಾಕರಂ (ನವರಸಪ್ರಕರಣ) ... | ೦—೧೨—೦ |
| ೧೦ | ಕೃಷ್ಣಗೋಪೀವಿಲಾಸ ಸಾಂಗತ್ಯ .. | ೦—೫—೬ |
| ೧೧. | ಮಲ್ಲಿನಾಥ ಪುರಾಣಂ ಟಿಪ್ಪಣಿಯೊಡನೆ .. | ೩—೦—೦ |
| ೧೨ | ಗದಾಯುದ್ಧಂ .. ... .. | ೧—೪—೦ |
| ೧೩. | ಚಿಕದೇವರಾಯ ವಂಶಾವಳಿ ಟಿಪ್ಪಣಿಯೊಡನೆ ... | ೧—೮—೦ |

ಈ ದರಕ್ಕೆ ಹಾಸಲು ಸೇರಿಲ್ಲ.

ಈ ಗ್ರಂಥಗಳು ಮೈಸೂರು ಕರ್ಣಾಟಕ ಕಾವ್ಯಮಂಜರಿ ಆಫೀಸಿನಲ್ಲಿಯೂ, ಮೈಸೂರು ದಿ. ಗ್ರಾಜ್ಯುಯೇಟ್ಸ್ ಟ್ರೇಡಿಂಗ್ ಅಸೋಸಿಯೇಷನಲ್ಲಿಯೂ ದೊರೆಯುತ್ತವೆ.